

# ಸಿದ್ಧಗಂಗಾ



ಜನವರಿ ೧೯೯೯

ಜನವರಿ ೩ರಂದು ಶ್ರೀ ಕ್ಷೇತ್ರದಲ್ಲಿ ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಸಾನಿಧ್ಯದಲ್ಲಿ ನಡೆದ ಲಗನೆಯ ಸಂಸ್ಕೃತೋತ್ಸವ ಕಾರ್ಯಕ್ರಮದಲ್ಲಿ ಪ್ರಧಾನಿ ಶ್ರೀ ಅಟಲ್ ಬಿಹಾರಿ ವಾಜಪೇಯಿ, ರಾಜ್ಯಪಾಲ ಶ್ರೀ ಖುರ್ಷಿದ್ ಆಲಂಖಾನ್, ಮುಖ್ಯಮಂತ್ರಿ ಶ್ರೀ ಜೆ.ಹೆಚ್. ಪಟೇಲ್ ಹಾಗೂ ಕೇಂದ್ರ ನಾಗರಿಕ ಮತ್ತು ವಿಮಾನಯಾನ ಸಚಿವ ಶ್ರೀ ಅನಂತಕುಮಾರ್ ಅವರು ಉಪಸ್ಥಿತಿರಿದ್ದರು.

ವರದಿ : ಪುಟ ೨೦

ಪ್ರಧಾನ ಸಂಪಾದಕರು
ಚನ್ನಪ್ಪ ಎರೇಸೀಮೆ

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

ಸಹ ಸಂಪಾದಕರು
ಎಚ್. ಎಸ್. ಸಿದ್ಧಗಂಗಪ್ಪ
ಎಂ. ರೇಣುಕಾರಾಧ್ಯ

ಸಲಹಾ ಸಮಿತಿ
ಡಾ. ಎಂ.ಎನ್. ಚನ್ನಬಸಪ್ಪ
ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ
ಗೊ.ರು. ಚನ್ನಬಸಪ್ಪ
ಟಿ. ಕೆ. ನಂಜುಂಡಪ್ಪ
ಟಿ.ಆರ್. ಮಹಾದೇವಯ್ಯ
ಪ್ರೊ. ಆರ್. ರಾಚಪ್ಪ
ಪಿ.ಎಸ್. ಪುಟ್ಟಶಂಕರಯ್ಯ
ಬಿ. ಎಸ್. ಪರಮಶಿವಯ್ಯ

ಸದಸ್ಯರು
ಕೆ.ಎಸ್. ಶಂಕರಯ್ಯ
ಸಿ. ಎಸ್. ಸಿದ್ಧಲಿಂಗಯ್ಯ
ಪಿ. ವಿ. ಮುಕ್ಕಣ್ಣವೀರಯ್ಯ
ಕೆ. ಸಿ. ಶಿವಗಂಗಯ್ಯ
ಎಸ್. ಪಿಶ್ವನಾಥ್
ಪಿ.ಎನ್. ಚಂದ್ರಶೇಖರಯ್ಯ
ಕೆ.ಎಚ್. ಶಿವರುದ್ರಯ್ಯ

ಪ್ರಕಾಶಕರು
*ಹೆಚ್.ಬಿ. ಗಂಗಾಧರಯ್ಯ*
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104

ಮುದ್ರಕರು :
ಗೀತಾಂಜಲಿ ಪ್ರಿಂಟರ್ಸ್, ನಂ. ೫,
ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩.೪೪೦೭೭


ರೇಖಕರ ಅಭಿಪ್ರಾಯಗಳು
ಶ್ರೀ ಮಠದ ಅಭಿಪ್ರಾಯಗಳಲ್ಲ



|| ಓಂ ಶ್ರೀ ಗುರು ಬಸವ ಲಿಂಗಾಯನಮಃ ||

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೫ ಜನವರಿ ೧೯೯೯ ಸಂಚಿಕೆ : ೧

ಒಳಪುಟಗಳಲ್ಲಿ ......




**ವಿಳಾಸ :**
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

**ಚಂದಾ ವಿವರ :**
ವಾರ್ಷಿಕ ಚಂದಾ ರೂ. ೫೦.
ಆಜೀವ ಸದಸ್ಯತ್ವ ರೂ. ೫೦೦.
ಬಿಡಿ ಪ್ರತಿ ರೂ. ೫.00


**ಸಾಹಿತ್ಯ, ಕಲೆ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ ಮೊದಲಾದ ಲೇಖನಗಳಿಗೆ ಸ್ವಾಗತವಿದೆ.**

# ಶತಮಾನ ಮುಗಿಯುವುದಕ್ಕೆ ಮೊದಲ ಹೆಜ್ಜೆ......

ಕೊನೆಗೆ ಮೊದಲು, ಇಪ್ಪತ್ತನೆಯ ಶತಮಾನ ಮುಗಿಯುವುದಕ್ಕೆ ಮೊದಲ ಹೆಜ್ಜೆ. ಒಮ್ಮೆ ಹಿಂದುರಿಗಿ ನೋಡಿದರೆ ಅದೆಷ್ಟೊಂದು ಘಟನೆಗಳನ್ನು ತನ್ನ ಗರ್ಭದಲ್ಲಿ ಹುದುಗಿಸಿಕೊಂಡು ಮುಂದೆ ಸಾಗಿದ ಈ ಶತಮಾನ. ನೂರು ವರ್ಷಗಳು ಸಂದು ಹೋಗುವುದೆಂದರೆ ಚರಿತ್ರೆಯ ಎಷ್ಟೊಂದು ಪುಟಗಳ ತುಂಬ ಚಿತ್ರ-ವಿಚಿತ್ರಗಳು. ಎರಡು ಜಾಗತಿಕ ಮಹಾ-ಯುದ್ಧಗಳನ್ನು ಕಂಡಿದ್ದು, ಈ ಶತಮಾನ ಶತಮಾನಗಳ ದುಃಖ ದುಮ್ಮಾನಗಳ ದಾಸ್ಯವನ್ನು ದಾಟಿ ಬಂದಿದ್ದು ಈ ಯುಗ. ಭರತಖಂಡ ಸ್ವಾತಂತ್ರ್ಯ ಸಂಭ್ರಮವನ್ನು ಪಡೆದುಕೊಂಡ ಭಾಗ್ಯ ಸಣ್ಣದೇನಲ್ಲ. ಅದಕ್ಕಾಗಿ ನಡೆದ ಹೋರಾಟ ಮರೆಯುವಂಥದಲ್ಲ. ವರ್ಣದ್ವೇಷದಿಂದ ಮುಕ್ತ ವಾತಾವರಣ ರೂಪಿತವಾಗಲು ಜಗತ್ತು ಅದೆಷ್ಟು ರಕ್ತ ಹರಿಸಿತು! ರಾಜಶಾಹಿ ಅಂತ್ಯವಾಗಿ ಪ್ರಜಾಪ್ರಭುತ್ವ ಪ್ರಾದುರ್ಭವಿಸಿದ್ದು ಅದೆಂಥ ಪುಣ್ಯ! ಇಂದು ಪ್ರಜೆಯೇ ಪ್ರಭು. ಪ್ರಜಾ ಪ್ರತಿನಿಧಿಗಳು ತಾವು ಸೇವಕರೆಂಬ ಸದ್ಭಾವ ಅಂಕುರಿಸಬೇಕಾಗಿದೆ. ಅಧಿಕಾರಿ ವರ್ಗದಲ್ಲಿ ಅದಿನ್ನೂ ಮೂಡಬೇಕಾಗಿದೆ. ದೇಶ ನನ್ನದು, ದೇಶಕ್ಕಾಗಿ ನಾನು ಎಂಬ ಸಮಷ್ಟಿ ಚಿಂತನೆ ಬೆಳೆಯಬೇಕಾಗಿದೆ.

ಹರಿದು ಹಂಚಿಹೋಗಿದ್ದ ಕರ್ನಾಟಕ ಮತ್ತೆ ಉದಯವಾದ ಭಾಗ್ಯ ಈ ಶತಮಾನದ ಅಸಾಮಾನ್ಯ ಸಾಧನೆ. ಅದಿನ್ನೂ ಪೂರ್ಣವಾಗಬೇಕಾಗಿದೆ. ನಾಡವರಿಗೆ ನಾಡಿನ ಬಗ್ಗೆ, ನುಡಿಯ ಬಗ್ಗೆ ಅಭಿಮಾನ ಬರಬೇಕು. ಕನ್ನಡ ನೆಲ-ಜಲಗಳ ಸಮಸ್ಯೆ ಪರಿಹಾರ ಕಾಣಬೇಕು. ಸರ್ವ ಧರ್ಮಗಳ ಸಮನ್ವಯವೆನಿಸಿಕೊಂಡ ನಾಡಿನಲ್ಲಿ ಸಂಘರ್ಷವಾಗದಂತೆ ಇಪ್ಪತ್ತನೆ ಶತಮಾನ ಆಶೀರ್ವದಿಸಬೇಕು.

ಶ್ರೀ ಸಿದ್ಧಗಂಗಾ ಮಠ ಕರ್ತೃತ್ವ ಶಕ್ತಿಯ ಸಂಕೇತವೆಂಬಂತೆ ಬೆಳೆದು ಬಂದದ್ದು ಈ ಶತಮಾನದಲ್ಲಿ. ಹನ್ನೆರಡನೆಯ ಶತಮಾನದ ಮಾನವೀಯತೆಯ ಮಂಗಳಮೂರ್ತಿ ಬಸವಣ್ಣನವರ ತತ್ವಾದರ್ಶಗಳಿಗೆ ಪ್ರಯೋಗಶಾಲೆಯೆಂಬಂತೆ ಅರಳಿದ್ದು ಈ ಕಾಲಾವಧಿಯಲ್ಲಿಯೇ. ಶತಮಾನದ ರತ್ನಮಂಗಲಕಲಶವಾಗಿ ಶ್ರೀಮಠವನ್ನು ಪರಮಪೂಜ್ಯ ಶ್ರೀಗಳವರು ತಮ್ಮ ಗುರು ಉದ್ದಾನ ಶಿವಯೋಗಿಗಳು ಕೊಟ್ಟ ಜೋಳಿಗೆಯ ಬಲದಿಂದ ಕಟ್ಟಿದ ಪವಾಡವನ್ನು ಈ ಶತಮಾನ ಕಂಡು ಧನ್ಯವೆನಿಸಿದೆ.

ಈ ಸಂಚಿಕೆಯೊಂದಿಗೆ 'ಸಿದ್ಧಗಂಗಾ' ಮೂವತ್ತೈದನೆಯ ಸಂಪುಟವಾಗಿ ನಿಮ್ಮ ಮುಂದೆ ಬರುತ್ತಿದೆ. ಕಳೆದ ಮೂವತ್ನಾಲ್ಕು ವರ್ಷಗಳಿಂದ ವಿವಿಧ ವಿನ್ಯಾಸಗಳೊಂದಿಗೆ ಅರಳುತ್ತಿದ್ದ ಪತ್ರಿಕೆ ೧೯೯೯ರಿಂದ ಹೊಸ ವಿನ್ಯಾಸ ಮತ್ತು ವರ್ಣಗಳೊಂದಿಗೆ ಬರುತ್ತಿರುವುದನ್ನು ಗಮನಿಸಿದ ಅಭಿಮಾನಿಗಳು, ಹಳೆಯ ವಿದ್ಯಾರ್ಥಿಗಳು, ವಿದ್ವಾಂಸರು ಪತ್ರಿಕೆಯ ಗುಣಮಟ್ಟವನ್ನು ಮುಕ್ತ ಕಂಠದಿಂದ ಪ್ರಶಂಶಿಸುತ್ತಿದ್ದಾರೆ. ಲೇಖಕರು, ಜಾಹೀರಾತು ಸಂಸ್ಥೆಗಳು, ಆಜೀವ ಸದಸ್ಯರು, ವಾರ್ಷಿಕ ಸದಸ್ಯರು ಸಹಕಾರದ ಮೂಲಕ ಪ್ರೋತ್ಸಾಹಿಸುತ್ತಿದ್ದಾರೆ. ಪತ್ರಿಕೆಯ ಪ್ರಕಾಶಕರು, ಸಂಪಾದಕ ಮಂಡಳಿ, ಸಲಹಾ ಸಮಿತಿ, ಮುದ್ರಣಾಲಯದ ಬಂಧುಗಳು ಸಕ್ರಿಯವಾಗಿ ಮುನ್ನಡೆಗೆ ಕಾರಣರಾಗಿದ್ದಾರೆ. ಅವರೆಲ್ಲರನ್ನೂ ಕೃತಜ್ಞತಾಪೂರ್ವಕವಾಗಿ 'ಸಿದ್ಧಗಂಗಾ' ಸ್ಮರಿಸುತ್ತದೆ. ೧೯೯೯ರ ಹೊಸವರ್ಷ ಪತ್ರಿಕೆಯ ಬಳಗದವರಿಗೆಲ್ಲ ಶುಭಾಶಯಗಳನ್ನು ಕೋರುತ್ತದೆ.

ಪತ್ರಿಕೆಯ ಶ್ರೀರಕ್ಷೆಯಾಗಿರುವ ಪರಮಪೂಜ್ಯ ಶ್ರೀಶ್ರೀಗಳವರಿಗೆ ಭಕ್ತಿಪೂರ್ವಕವಾಗಿ ಪ್ರಣಾಮಗಳನ್ನು ಅರ್ಪಿಸುತ್ತ, ಹಳೆಯ ವಿದ್ಯಾರ್ಥಿಸಂಘದ ಹೆಸರನ್ನು ಉಸಿರಾಗಿಸಿಕೊಂಡು ಪತ್ರಿಕೆ ಸೇವಾಪಥದಲ್ಲಿ ಮುನ್ನಡೆಯಲು ತಮ್ಮ ಹರಕೆ ಹಾರೈಕೆಗಳನ್ನು ಬೇಡುತ್ತದೆ.

-- **ಸಂಪಾದಕ**





## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಪರಿಪೂತ ಪರಿಣಾಮಿ ಪರಮ ಪರಂಜ್ಯೋತಿ
ಪರಮ ಪಾವನತೇಜ ಶ್ರೀ ಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾತಿನಲಿ ಹಿಡಿದಿಡಲಾಗದು ನಿನ್ನ ಚರಿತ
ಗೀತದಲಿ ಸೋಲುವುದು ಸಿರಿ ಕಂಠ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮುಪ್ಪ ಮುಂಗಡಿಸಿದೆ ಮುಪ್ಪ ಮುಕುಟಗೈದ
ಒಪ್ಪಹಿಟ್ಟಿರುವ ನಿಜಕಾಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಿದ್ಧರ ಸಿರಿಭೂಮಿಯನು ಉದ್ಧರಿಸಿದ ಗುರುವೆ
ಎದ್ದು ನಿಂದಿರುವೆ ನಗುನಗುತ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತಪಪಾದಪ ನಡೆಚೆಂದ ತಪರಸನೆಯ ನುಡಿ ಚೆಂದ
ತಪಕಂಗಳ ನೋಟ ಬಲು ಚೆಂದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾವಿಯುಡುಗೆಯನುಟ್ಟು ಶಿವನಭವೆ ತಾನಾದೆ
ದೇಗುಲವೆ ನಡೆದಿದೆ ಎನಿಸಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಇದ್ದು ಇದ್ದನಲ್ಲಸುಳಿದು ಸೂತಕಿಯಲ್ಲ'
ಗದ್ದು ನಡೆದಿರುವೆ ಇಹವನ್ನು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೃದಯದುಗ್ರಾಣದಲಿ ಶಿವಭಾವ ಶಿವ ಚಿಂತೆ
ಸದಯಸಾಂತಃಕರುಣಕಾಯಕದಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹಿಂದು ಮುಂದುಗಳನ್ನು ಇಂದು ನೀ ಹರಗಿರುವೆ
ಪ್ರೀತಿ ಕೂರಿಗೆಯಿಂದ ಬಿತ್ತಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

-- **ಹೆಚ್. ವಿ. ವೀರಭದ್ರಯ್ಯ**



## ಶ್ರೀ ವಾಣಿ

### ಶಿಕ್ಷಕರು ಚಲಿಸುವ ಜ್ಞಾನಭಂಡಾರ

ಶಿಕ್ಷಣ ಕ್ಷೇತ್ರ ಎಲ್ಲರೂ ಆಯ್ದುಬಿಟ್ಟ ಕ್ಷೇತ್ರವಲ್ಲ. ಇದೊಂದು ಸಾಧನೆಯ ಕರ್ಮಕ್ಷೇತ್ರ. ಎಲ್ಲಿಯೂ ಸಲ್ಲದವರು ಇಲ್ಲಿ ಸಲ್ಲುವರು ಎಂಬ ಭಾವನೆ ಸಲ್ಲದು. ಇಲ್ಲಿ ಸಲ್ಲುವರು ಎಲ್ಲಿಯೂ ಸಲ್ಲುವರೆಂಬುದನ್ನು ನಮ್ಮ ಇತಿಹಾಸವೇ ಸ್ಪಷ್ಟಪಡಿಸಿದೆ. ಬುದ್ಧ, ಬಸವ, ಶಂಕರ, ಮಹಾವೀರ, ಬಸವಣ್ಣನಂತಹ ಲೋಕ ಶಿಕ್ಷಕರಿಗೆ ಜನ್ಮಕೊಟ್ಟ ರಾಷ್ಟ್ರ ಭರತಖಂಡ. ಡಾ. ರಾಧಾಕೃಷ್ಣ, ಲಾಲ್ ಬಹಾದ್ದೂರ್ ಶಾಸ್ತ್ರಿಗಳಂಥ ಮೇಧಾವಿ ಶಿಕ್ಷಕರು ಜನ್ಮ ತಾಳಿದ ಪುಣ್ಯಭೂಮಿ ಭಾರತ. ಆದರೆ ಅವರು ಸಾರಿಹೋದ ಸಂದೇಶಗಳು ಇಂದು ಕಣ್ಮರೆಯಾಗಿವೆ. ಅವರು ನೀಡಿದ ಸಾರ್ವಕಾಲಿಕ ಧರ್ಮ ಸಂದೇಶಗಳನ್ನು ಶಿಕ್ಷಣದಲ್ಲಿ ತಿಳಿಸುವಂತಹ ವ್ಯವಸ್ಥೆ ಮಾಡಬೇಕಾಗಿದೆ. ವಿಜೃಂಭಿಸುತ್ತಿರುವ ವೈಜ್ಞಾನಿಕ ಸಾಧನೆಗಳು ನಾಗರಿಕತೆ ಮತ್ತು ಸಂಸ್ಕೃತಿಗಳ ಮೇಲೆ ದಾಳಿ ಮಾಡಿವೆ. ತಾಂತ್ರಿಕಜ್ಞಾನದ ಪ್ರಗತಿಯನ್ನಿಂದು ಮಾನವೀಯ ಮೌಲ್ಯಗಳಿಗೆ ಧಕ್ಕೆಯಾಗದ ರೀತಿಯಲ್ಲಿ ನೋಡಿಕೊಳ್ಳಬೇಕಾಗಿದೆ. ಜೀವನ್ಮಾರಕ ದೃಷ್ಟಿ ಬದಲಾಗಿ ಜೀವ ಕಲ್ಯಾಣದೃಷ್ಟಿ ಪುನರುದಯವಾಗಬೇಕು.

ಶಿಕ್ಷಕ ಎಲ್ಲಕ್ಕೂ ಮೊದಲು ಚಾರಿತ್ರ್ಯ ಶುದ್ಧಿಯನ್ನು ಕಾಪಾಡಿಕೊಳ್ಳಬೇಕು. ಆಚಾರ್ಯ ಪದವಿ ಸದಾ ಜಾಗ್ರತವಾಗಿರುವಂಥದ್ದು. ಸಮಾಜ ಅದರಲ್ಲೂ ತನ್ನ ಬಳಿಗೆ ಕಲಿಯಲು ಬರುವ ವಿದ್ಯಾರ್ಥಿಗಳು ತೆರೆದ ಕಣ್ಣಿನಿಂದ ಶಿಕ್ಷಕನನ್ನು ನೋಡುತ್ತಿರುತ್ತವೆ. ಅಧ್ಯಯನ ಶೀಲನಾಗದವ ಸಮರ್ಥ ಶಿಕ್ಷಕನೆನಿಸಲಾರ. ಅವನೊಂದು ಚಲಿಸುವ ಜ್ಞಾನ ಭಂಡಾರ. ಎಪ್ಪತ್ತು-ಎಂಬತ್ತು ವರ್ಷಗಳ ಹಿಂದೆ ಇದ್ದ ಶಿಕ್ಷಕ ಶ್ರೇಷ್ಠರು ಇಂದು ವಿರಳವಾಗುತ್ತಿರುವುದು ವಿಷಾದನೀಯ. ಸರಳ ಜೀವನ ಉನ್ನತ ಚಿಂತನಕ್ಕೆ ಭಾಷ್ಯವಾಗಿದ್ದ ವಿಶ್ವವಿದ್ಯಾಲಯಗಳಲ್ಲಿದ್ದ ಪ್ರಾಧ್ಯಾಪಕರು ಈಗ ಅಪರೂಪವಾಗುತ್ತಿದ್ದಾರೆ. ಭೋಗ ಜೀವನದ ಬೆನ್ನಟ್ಟಿ ಧಾವಿಸುತ್ತಿದ್ದಾರೆ. ಪ್ರತಿಭಾವಂತರಿಲ್ಲವೆಂದಲ್ಲ. ಆದರೆ ಅವರ ಸಂಖ್ಯೆ ಅಲ್ಪ, ಜೀವನದ ಎಲ್ಲ ಕ್ಷೇತ್ರಗಳೂ ಅಪಮೌಲ್ಯಗೊಳ್ಳುತ್ತಿವೆ. ಅವು ಸುಧಾರಿಸಬೇಕಾದರೆ ಶಿಕ್ಷಕರು ಮತ್ತು ಮಾತೆಯರು ಸಂಕಲ್ಪಚಿತ್ತರಾಗಬೇಕು.

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

ಮಂದ ಬೋಳಾಗಿ ಮೈ ಬತ್ತಲೆಯಾಗಿಪ್ಪವರ ಕಂಡರೆ

ನಿರ್ವಾಣಿಗಳೆಂಬನೆ? ಎನ್ನನಯ್ಯಾ,

ಅಖಂಡಿತವಾಗಿ ಮನ ಬೋಳಾಗಿ ಭಾವ ಬತ್ತಲೆಯಾಗಿರಬಲ್ಲರೆ

ಅದು ನಿರ್ವಾಣವೆಂಬೆ ಕಾಣಾ,

ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ!

ತಲೆಯನ್ನು ಬೋಳಿಸಿಕೊಂಡು ಮೈಮೇಲೆ ಬಟ್ಟೆಯನ್ನು ಹಾಕಿಕೊಳ್ಳದೆ ದಿಗಂಬರನಾಗಿ ಸಂಚರಿಸುವವರನ್ನು ಕಂಡು ಜೀವನ್ಮುಕ್ತರೆಂದು ನಾನೆಂದೂ ಹೇಳಲಾರೆ. ಜೀವನ್ಮುಕ್ತಿಯು ತಲೆಬೋಳು, ಮೈ ಬತ್ತಲೆಯಾಗುವುದರಲ್ಲಿರುವುದಿಲ್ಲ. ಅದು ಮನ ಬೋಳಾಗಿ, ಭಾವ ಬತ್ತಲೆಯಾಗುವಲ್ಲಿಯೇ ಇರುವುದು. ಮನ ಬೋಳಾಗುವುದೆಂದರೆ ಮನಸ್ಸಿನಲ್ಲಿ ಯಾವ ವಿಷಯಗಳ ಬಗೆಗೂ ನೆನಹಿಲ್ಲದಿರುವುದು. ಸೂಕ್ಷ್ಮವಾಗಿಯೂ ಸಹ ವಿಷಯ ವಾಸನೆಯು ಭಾವದಲ್ಲಿರದೆ ಶಿವಭಾವವದು ಮಾತ್ರ ತುಂಬಿದ ಭಾವವು ಭಾವ ಬತ್ತಲೆಯೆನಿಸುವುದು. ಇಂತಹ ಸ್ಥಿತಿಯುಂಟಾದಾಗಲೇ ಜೀವನ್ಮುಕ್ತಿಯು ಸಾಧ್ಯವಾಗುವುದು.

(ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ.ತೋಂ.ಸಿ.ಕೈ. ಸೇ. ಸಂಘ, ಎಡೆಯೂರು-ಗದಗ)

## ಶ್ರೀ ಪಾದ ಪ್ರಾರ್ಥನ ಪದ್ಯ ಪಂಚಕಂ



ಶಾ॥ ವಿ॥

ಶ್ರೀಮತ್ಸದ್ಗುಣಮೂರ್ತಿ ಮದ್ಗುರುವರಂ ನಿತ್ಯಾನ್ನದಾನಪ್ರಿಯಂ।
ಶ್ರೀಮತ್ಸಂಸ್ಕೃತ ವಿದ್ಯೆವರ್ಧನ ವಿಭುಂ ಕಾಸದ್ಬೋಧ ಚಕ್ರಧಿಪಂ।
ಶ್ರೀಮನ್ಮಂಗಳ ಪುಣ್ಯದಿಂ ಮೊಳಗುವಾ ಶ್ರೀ ಸಿದ್ಧಗಂಗಾಧಿಪಂ।
ಶ್ರೀಮತ್ಸ್ವಾಮಿಯು ಕಾಯ್ವುದೆಮ್ಮನನುವಿಂದುದ್ದಾನಯೋಗೀಶ್ವರಂ। ॥1॥

ಕರುಣಾಮಯ ಗುರು ನಿಮ್ಮಯ ।
ಕಾರುಣ್ಯದ ನೆರವಿನಿಂದೆ ಬದುಕಿದೆ ಲೋಕಂ ।
ಗುರುದೇವ ಸಿದ್ಧಲಿಂಗನು ।
ಕರುಣದಿ ತಮಗಿತ್ತು ಸುಖವ ಪೊರೆಯಲಿ ನಮ್ಮಂ ॥2॥

ತನುವಂ ಗರುವಿನ ಸೇವೆಗೆ ।
ಮನಮಂ ಮಹಲಿಂಗ ಸೇವೆಗಾಗಿಯೆ ಸತತಂ ।
ಧನಮಂಜಂಗಮ ಕೋಟಿಗೆ ।
ಘನದಿಂದೀಯುತ್ತೆ ನಲಿವೆ ಗುರುಶಿವಕುವರಂ ॥3॥

ಗುರುದೇವ ನಿಮ್ಮ ದರ್ಶನ ।
ಗುರುದೇವಾ ನಿಮ್ಮ ಪಾದ ಸಂಸ್ಪರ್ಶನಮುಂ ।
ಗುರುದೇವ ನಿಮ್ಮ ಸೇವೆಯು ।
ಪರತರ ಮಹ ಗಣ್ಯಪುಣ್ಯದಾಲಯ ಮಲ್ತೆ ॥4॥

ಮ॥ ವಿ॥

ಧರೆಯೊಳ್ ಧಾರ್ಮಿಕ ತತ್ವಮಂ ಪ್ರಕಟಿಸಲ್ ಪುಟ್ಟಿರ್ಪಪಂಚಾನನಂ।
ನರರಜ್ಞಾನದ ಕುತ್ತಮಂ ಬಡಿದಿಡಲ್ ಬಂದಿರ್ಪ ಧನ್ವಂತರೀ।
ತಿರೆಯೊಳ್ಳೇಳ್ಗರ ಭೀಷ್ಟವನ್ನೊಡರಿಸಲ್ ನಿಂದಿರ್ಪ ಕಲ್ಪದ್ರುಮಂ।
ಗುರುದೇವಂ ಶಿವಪುತ್ರನೀಗೆ ನಲವಿಂದೆಮಿಷ್ಟ ಸಂಸಿದ್ಧಿಯಂ ॥5॥

ಭದ್ರಂ - ಶುಭಂ - ಮಂಗಳಂ.

ಲಿಂ॥ ಹೆಚ್. ಸಿ. ಶಿವಪ್ಪ

ಸಂದರ್ಭ : ದಿನಾಂಕ 4-4-1948ರಂದು ಪರಮ ಪೂಜ್ಯ ಶ್ರೀ ಶ್ರೀಗಳವರು ತುಮಕೂರು ತಾಲ್ಲೂಕು ನಂದೀಹಳ್ಳಿ ಪ್ರಾಥಮಿಕ ಶಾಲಾ ವಾರ್ಷಿಕೋತ್ಸವ ಸಮಾರಂಭದಲ್ಲಿ ಭಾಗವಹಿಸಿದಾಗ ಅರ್ಪಿಸಿದ ಕವನ ಕುಸುಮ





# ನಾ ಕಂಡ ಉದ್ದಾನ ಶಿವಯೋಗಿಗಳು

- ಡಾ॥ ಜಿ. ಮರುಳಸಿದ್ಧಯ್ಯ

ಶ್ರೀ ಶಿವಯೋಗಿಗಳ ವ್ಯಕ್ತಿತ್ವದಲ್ಲಿ ಬಹುಪಾಲು ಅಜ್ಞಾತವಾದುದು. ಅವರು ಹುಟ್ಟಿ ಬೆಳೆದು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದುದು ಧರ್ಮಕರ್ಮಸುಯೋಗವೆಂದು ಕೆಲವರ ಭಾವನೆ. ಕೆಲವರು ಶ್ರೀಗಳನ್ನು ದೂರದಿಂದಲೂ ಕಾಣುತ್ತಾರೆ. ಇನ್ನು ಹಲವರು ಅವರ ಜೀವನವನ್ನು ವಿಮರ್ಶಿಸಿ ದೂರಾಲೋಚನೆ ಮಾಡಿಯೂ ನಿರ್ಧರಿಸುವರು. ನಾನು ಶ್ರೀ ಕ್ಷೇತ್ರದಲ್ಲೇ ವಿದ್ಯಾಭ್ಯಾಸ ಮಾಡಿ ಶ್ರೀಗಳವರ ಸಾನ್ನಿಧ್ಯದಲ್ಲಿದ್ದುಕೊಂಡು ಅವರನ್ನು ಸಾಕ್ಷಾತ್ ದರ್ಶನ ಮಾಡಿಕೊಂಡಿರುವನು. ಆದ್ದರಿಂದ ಅವರ ಪೂರ್ವಾಶ್ರಮ ಹಾಗೂ ಪುನರ್‌ಜನ್ಮದ ಬಗ್ಗೆ ಇರುವ ಅನೇಕ ಕತೆಗಳನ್ನು ಒರೆಗಲ್ಲಿಗೆ ಹಚ್ಚಿ ಸತ್ಯಾನ್ವೇಷಣೆ ಮಾಡಿದ್ದೇನೆ. ಇಲ್ಲಿನ ಕೆಲವು ವಿಷಯಗಳು ಶ್ರೀಗಳವರ ನಿಕಟವರ್ತಿಗಳಿಂದಲೂ, ಸಹಪಾಠಿಗಳಿಂದಲೂ ತಿಳಿದುಬಂದವು. ಹಲವು ಸ್ವಾನುಭವದಿಂದ ತಿಳಿದವು. ಆದರಿಂದ ಇಲ್ಲಿ ಕಟ್ಟುಕತೆಗಳಿಗೂ, ಸಲ್ಲದ ಉತ್ಪ್ರೇಕ್ಷೆಗಳಿಗೂ ಅವಕಾಶವಿತ್ತಿಲ್ಲ.

ಒಟ್ಟಿನಲ್ಲಿ ಶ್ರೀಗಳ ಜೀವನ ಅಧ್ಯಾತ್ಮಮಯ, ತಪೋಮಯ, ಪುರುಷಾಕಾರಮಯ **'ಕಾಯಕವೇ ಕೈಲಾಸ'** ವೆಂದು ಶ್ರೀ ಸಿದ್ಧಗಂಗಾಕ್ಷೇತ್ರದ ಸರ್ವತೋಮುಖವಾದ ಏಳಿಗೆಗಾಗಿ ಅಧ್ಯಾತ್ಮ ಶರೀರ ಎರಡನ್ನೂ ಧಾರೆಯೆರೆದ ಜೀವನ್ಮುಕ್ತರು.



ಪಾರಭಾಷಿಕ ವಿದ್ಯಾಭ್ಯಾಸವು ಅಷ್ಟಾಗಿಲ್ಲದಿದ್ದರೂ ಜನ್ಮಜನಮಾಂತರದ ತಪೋಮಹಿಮೆಯಿಂದ ಶುದ್ಧಸ್ಫಟಿಕ ಸಂಕಾಶವಾದ ಕ್ಷೇತ್ರವನ್ನು ಆದರ್ಶದ ಅಡಿಗಲ್ಲಿನ ಮೇಲೆ ಕಟ್ಟಲು ದೈವಪ್ರೇರಿತ ಶಿವಶಿಲ್ಪಿಯಂತೆ ಕ್ಷೇತ್ರದಲ್ಲಿ ನಿಂತರು. ಶ್ರೀ ಕ್ಷೇತ್ರದಲ್ಲಿ ವಿದ್ಯೆ ಹಾಗೂ ಸಂಸ್ಕೃತಿಗಳ ತಳಪಾಯವನ್ನು ಕಟ್ಟಿದರು. ಸ್ವಯಂ ಆಧ್ಯಾತ್ಮಿಕ ಸಂಪೂರ್ಣತೆ ಪಡೆದು ಉಳಿದವರಲ್ಲೂ ಅದನ್ನು ರೂಢಿಸಲು ಪ್ರಯತ್ನಿಸಿ ಕ್ಷೇತ್ರದಲ್ಲಿ ನೈತಿಕ ಹಿನೆಲೆಯನ್ನು ಬಹು ಭದ್ರವಾಗಿ ರೂಪಿಸಲು ಹವಣಿಸಿದರು. ವಿದ್ಯಾದಾನ, ಅನ್ನದಾನಗಳ ನೆಲೆಯ ಮೇಲೆ ಕಾಯಕ ಮಂತ್ರದಿಂದ, ತಪಶ್ಯಕ್ತಿಯಿಂದ ಪುಣ್ಯಕ್ಷೇತ್ರವೆಂದು ಜನಶ್ರುತಿ ಮೊಳಗುವಂತೆ ಮಾಡಿ ಶ್ರೀ ಕ್ಷೇತ್ರಕ್ಕೆ ಸುಭದ್ರ ಅಡಿಪಾಯವನ್ನು ಹಾಕಿದರು. ಇಷ್ಟಾದರೂ ಅಹಂಕಾರ ಇವರನ್ನು ಮುಟ್ಟಲಿಲ್ಲ.

### ಬಾಲ್ಯ ಜೀವನ

ಶ್ರೀ ಕ್ಷೇತ್ರಕ್ಕೆ ಪೂರ್ವದಲ್ಲಿರುವ ದಾಬಸ್‌ಪೇಟೆ ಹತ್ತಿರವಿರುವ ಲಕ್ಕೂರು ಶ್ರೀಗಳ ಜನ್ಮಸ್ಥಳ. ಬಾಲ್ಯದಲ್ಲೇ ಅವರು ಶಿವಪೂಜಾ ದುರಂಧರರಾಗಿದ್ದರು. ಇದನ್ನು ಇಷ್ಟಪಡದ ಅವರ ಮಾತಾಪಿತೃಗಳು ಅವರನ್ನು ಮೇಕೆ ಕಾಯಲು ಕಳುಹಿಸಿದರು. ಏಕಾಂತ ಧ್ಯಾನಕ್ಕೆ ಸದವಕಾಶವನ್ನು ನೀಡುವ ಈ ಕೆಲಸವನ್ನು ಮನಸಾರ ಒಪ್ಪಿದರು. ಸಂತೋಷದಿಂದ ಊರ ಮಗ್ಗುಲಿನಲ್ಲಿರುವ ನಿಜಗಲ್ ದುರ್ಗದಲ್ಲಿ ಮೇಕೆ ಕಾಯುವ ಕಾರ್ಯ ಆರಂಭವಾಯಿತು. ಕ್ರಮೇಣ ಶ್ರೀ ಸಿದ್ಧಗಂಗಾ ಕ್ಷೇತ್ರದ ಹೆಸರು ಇವರ ಕಿವಿಗೆ ಬಿತ್ತು. ಸಂಸಾರದ ಜಂಗುಳಿಯಿಂದ ಮನಸ್ಸು ರೋಸಿ ಹೋಗಿತ್ತು. ಗ್ರಾಮವಾಸವು ಬೇಸರವಾಗಿ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಹೋಗಲು ನಿಶ್ಚಯಿಸಿದರು. ಪೂರ್ವಪುಣ್ಯವಿರಬೇಕು. ನಿಜಗಲ್ ಬೆಟ್ಟದಲ್ಲಿ ಅವರಿಗೆ ಋಷಿಸಂಪರ್ಕ ಬೆಳೆದು ಅದರ ಫಲವಾಗಿ ಮಂತ್ರ, ತಂತ್ರ, ಯೋಗಾಭ್ಯಾಸ ಇವುಗಳಲ್ಲಿ ಪೂರ್ಣಪರಿಣತಿಯುಂಟುಮಾಡಿತು. ದೃಢಕಾಯರೂ ಗುರುಸೇವಾನಿಷ್ಠರೂ ಆಗಿದ್ದ ಇವರಿಗೆ ಶ್ರೀ ಕ್ಷೇತ್ರದಲ್ಲಿ ಶ್ರೀ ಮನ್ನಿರಂಜನ ಅಡವಿಸ್ವಾಮಿಗಳ ಆಶೀರ್ವಾದವಾಯಿತು. ಬೆಳಕಿಗೆ ಬರುತ್ತಿದ್ದ ಶ್ರೀ ಕ್ಷೇತ್ರದ ದಾಸೋಹಕ್ಕಾಗಿ ಸೌದೆ ತರುವುದು ಇವರ ಕೆಲಸವಾಯಿತು. ಇದುವೆ ಅವರ ಪ್ರತಿದಿನದ ಕಾಯಕ.

ಅವಕಾಶ ದೊರೆತಾಗ ತಮ್ಮ ಶಿವಯೋಗಾಭ್ಯಾಸ ಪ್ರಾಣಾಯಾಮಾದಿ ಗಳನ್ನೂ ಮಾಡಿಕೊಳ್ಳುತ್ತಿದ್ದರು. ಇವರ ಪೂರ್ವಾಶ್ರಮದ ಹೆಸರು ರುದ್ರಪ್ಪ. ರುದ್ರಪ್ಪನವರು ಹೆಸರಿಗೆ ತಕ್ಕಂತೆ ಉಗ್ರಮೂರ್ತಿ. ಈ ಭಾವ ಪ್ರಾಯಃ ಅವರ ಜೀವನದ ಕೊನೆಯ ತನಕವೂ ಇದ್ದಿತು. ಇದರಿಂದಾಗಿ ಅವರ ವ್ಯಕ್ತಿತ್ವದಲ್ಲಿ ಕಳೆಯೇರಿತೇ ವಿನಾ ನ್ಯೂನತೆ ಯುಂಟಾಗಲಿಲ್ಲ.

**ಅಧ್ಯಾತ್ಮ - ಸಸಿ ಮರವಾಯಿತು**

ನಿಜಗಲ್ ಬೆಟ್ಟದಲ್ಲಿ ದೊರೆತ ಮುನಿಸಂಪರ್ಕ ಅವರಲ್ಲಿ ರೂಢಮೂಲವಾಗಿತ್ತು. ಕತ್ತಲಲ್ಲಿ ಸೌದೆಗಾಡಿಗಳನ್ನು ತರುವ ಸಂದರ್ಭದಲ್ಲಿ ರುದ್ರಪ್ಪನವರೇ ದಾರಿ ಕಾಣುವುದಿಲ್ಲವೆಂದಾಗ ಗಾಡಿಯ ಇಕ್ಕೆಲಗಳಲ್ಲೂ ಪಂಜುಗಳು ಗಾಡಿಗಳನ್ನು ಮಠದವರೆಗೂ ಸುಖವಾಗಿ ಒಯ್ಯುತ್ತಿದ್ದುವು. ಕೆಲಸದವರಿಗೆ ಯಾವುದಾದರೂ ಕಾಯಿಲೆ ಬಂದಾಗ ರುದ್ರಪ್ಪನವರು ಮಂತ್ರ ಶಕ್ತಿಯಿಂದ ಅವರನ್ನು ಗುಣಪಡಿಸುತ್ತಿದ್ದರು. ಮಂತ್ರಶಕ್ತಿಯನ್ನು ಮಾತ್ರವಲ್ಲ, ರುದ್ರಪ್ಪನವರು ಕೆಲಮಟ್ಟಿಗೆ ವೈದ್ಯವನ್ನೂ ತಿಳಿದಿದ್ದರು. ಇವರ ಮಂತ್ರಶಕ್ತಿಯ ವಿಚಾರವು ಶ್ರೀ ಅಡವಿಸ್ವಾಮಿಗಳ ಕಿವಿಗೂ ಮುಟ್ಟಿತು. ಅಸೂಯೆಪಡದ ಅವರು ರುದ್ರಪ್ಪನವರನ್ನು ತಮ್ಮ ಶಿಷ್ಯನನ್ನಾಗಿ ಏಕೆ ಪಡೆದುಕೊಳ್ಳಬಾರದು ಎಂದು ಯೋಚಿಸತೊಡಗಿದರು. ಅವರ ನಿರಂತರ ಸೇವೆ ಹಾಗೂ ಮಠದ ಕಾರ್ಯಕಲಾಪಗಳಲ್ಲಿ ಅವರಿಗಿದ್ದ ನಿಷ್ಠೆಯಿಂದ ಸಂತುಷ್ಟರಾದ ಶ್ರೀ ಅಡವಿಸ್ವಾಮಿಗಳಲ್ಲಿ ರುದ್ರಪ್ಪನವರನ್ನು ಕ್ಷೇತ್ರದ ಉತ್ತರಾಧಿಕಾರಿಗಳನ್ನಾಗಿ ಮಾಡಿಬಿಡುವ ಸಂಕಲ್ಪ ಮೊಳಕೆಗೊಂಡಿತು.

**ಅಡವಿಸ್ವಾಮಿಗಳಿಗೆ ಮಾಟ**

ರುದ್ರಪ್ಪನವರನ್ನು ಉತ್ತರಾಧಿಕಾರಿಗಳನ್ನಾಗಿ ಮಾಡಿಕೊಳ್ಳುವ ಸುದ್ದಿಕೇಳಿದ ಜನರು ಶ್ರೀಗಳಿಗೆ ಯಾರೋ ಮಾಟ ಮಾಡಿಸಿದರೆಂಬುದು ಒಂದು ವಂದತಿ! ಅಡವಿಸ್ವಾಮಿಗಳು ಪರಿತಪಿಸುವುದನ್ನು ಕಂಡ ರುದ್ರಪ್ಪನವರು ಮಾಟಮಂತ್ರಗಳಲ್ಲಿ ಪಳಗಿದ್ದವರಾದ್ದರಿಂದ ಕೂಡಲೇ ಶ್ರೀಸ್ವಾಮಿಗಳ ಮಾಟವನ್ನು ಕಿತ್ತೂಗೆದರು. ಅಡವಿಸ್ವಾಮಿಗಳ ಪೀಡಾ ಪರಿಹಾರವಾಯಿತು. ರುದ್ರಪ್ಪನವರ ಮೇಲೆ ಸ್ವಾಮಿಗಳ ಕೃಪೆ ಇನ್ನೂ ಹೆಚ್ಚಾದರೂ ಅವರನ್ನು ಶ್ರೀಗಳು ಕರೆದು ಈಗಲೇ ಈ ಮಾಯ ಮಾಟಗಳನ್ನು ಬಿಟ್ಟು ಬಿಡು ಎಂದು ಆಜ್ಞಾಪಿಸಿ ಅವರಿಂದ ನಮಸ್ಕಾರ ಹಾಕಿಸಿಕೊಂಡರಂತೆ.

**ಅದ್ಭುತ ಬ್ರಹ್ಮರಾಕ್ಷಸ ಘಟನೆ**

ಸಕಲೇಶಪುರದ ತೋಟದ ಗದ್ದೆ ಎಸ್ಟೇಟಿನ ಕಾಫಿ ಪ್ಲಾಂಟರ್ ಶ್ರೀ ದೇವಪ್ಪಗೌಡರಿಗೆ ಬ್ರಹ್ಮರಾಕ್ಷಸನ ಕಾಟ. ಅವರನ್ನು ಸಿದ್ಧಗಂಗೆಗೆ ಬ್ರಹ್ಮರಾಕ್ಷಸ ಮೋಕ್ಷಕ್ಕಾಗಿ ಕರೆತಂದರು. ಬ್ರಹ್ಮರಾಕ್ಷಸ ಹಿಡಿದ ದೇವಪ್ಪಗೌಡರನ್ನು ಶ್ರೀ ಅಡವೀ ಸ್ವಾಮಿಗಳ ಎದುರಿನಲ್ಲಿ ನಿಲ್ಲಿಸಿದಾಗ ಅವರು 'ಇವನಾರು? ಇವನಲ್ಲ ನನ್ನ ಗುರು. ನನ್ನ ಗುರುವೆಲ್ಲಿ'? ಎಂದು ಗರ್ಜಿಸಿ ತಿರುಗುಮುರುಗಾಗಿ ನಿಂತರು. ಸೌದೆ ಗಾಡಿಯನ್ನು ಹೊಡೆದುಕೊಂಡು ರುದ್ರಪ್ಪನವರು ಬರುತ್ತಲೇ 'ಗುರುವೆ!ನನ್ನನ್ನು ಕಾಪಾಡಬೇಕು' ಎಂದು ದೇವಪ್ಪಗೌಡರು ರುದ್ರಪ್ಪನವರ ಕಾಲುಗಳನ್ನು ಹಿಡಿದುಕೊಂಡರಂತೆ. ಆಗ ದೇವಪ್ಪಗೌಡರಲ್ಲಿ ಅವಾಹಿತನಾಗಿದ್ದ ಬ್ರಹ್ಮರಾಕ್ಷಸನು ತಮ್ಮಿಬ್ಬರ ಪೂರ್ವಜನ್ಮದ ವೃತ್ತಾಂತವನ್ನು ಹೇಳುವ ಸಂದರ್ಭದಲ್ಲಿ ತಾವೀರ್ವರೂ ಅಲ್ಲಿ ಋಷಿಗಳಾಗಿದ್ದರೆಂದೂ ಶ್ರೀ ಗಂಗಾಂಬಿಕೆಯು ದರ್ಶನವಿತ್ತಾಗ ಗೈದ ಒಂದು ಅಪರಾಧಕ್ಕಾಗಿ ತಾನು ಬ್ರಹ್ಮರಾಕ್ಷಸ ಪೀಡೆಗೆ ಬಲಿಯಾದುದಾಗಿಯೂ ಅದು ತಮ್ಮಿಂದ ನಿವಾರಣೆಯಾಗ ಬೇಕೆಂದೂ ನುಡಿದನು. ಆಗಲೇ ಬ್ರಹ್ಮರಾಕ್ಷಸ ಶ್ರೀರುದ್ರಪ್ಪನವರನ್ನು ಹೆಗಲಮೇಲಿರಿಸಿಕೊಂಡು ಕ್ಷೇತ್ರದ ಮಗ್ಗುಲಲ್ಲಿರುವ ರಾಮಲಿಂಗ ದೇವ ಬೆಟ್ಟದಲ್ಲಿರುವ ಶ್ರೀ ದೊಡ್ಡ ಸಿದ್ದಪ್ಪನವರ ಗವಿಗೆ ಹೋಗಿ ಅಲ್ಲಿ ತಾವೀರ್ವರೂ ತಪಸ್ಸು ನಡೆಸಿದ ಸ್ಥಳ ಗುರುತು ಇತ್ಯಾದಿಗಳನ್ನು ತೋರಿಸಿತು. ಇದನ್ನು ಶ್ರೀ ಅಡವಿಸ್ವಾಮಿಗಳು ಕಣ್ಣಾರೆ ಕಂಡಿದ್ದುದರಿಂದಲೇ ರುದ್ರಪ್ಪನವರನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ನೇಮಿಸಲು ನಿರ್ಧರಿಸಿದುದು.

**ಮಳೆ ಬಿಟ್ಟರೂ ಮರದ ಹನಿ ಬಿಡಲಿಲ್ಲ**

ಶ್ರೀ ಕ್ಷೇತ್ರದಲ್ಲಿ ರುದ್ರಪ್ಪನವರು ಪ್ರಭಾವಿಗಳಾದರು. ಇತ್ತ ಶ್ರೀ ಅಡವಿಸ್ವಾಮಿಗಳ ಅವಸಾನಕಾಲವೂ ಪ್ರಾಪ್ತವಾಗಿ ಅವರು ಹಠಾತ್ತನೆ ತೊಟ್ಟಿಲಕೆರೆಯಲ್ಲಿ ಶಿವೈಕ್ಯರಾದರು. ಬರೀ ಮೈಯಲ್ಲೇ ಅವರ ಸಮಾಧಿಕಾರ್ಯಗಳನ್ನು ನೆರವೇರಿಸಹೋದ ಶ್ರೀ ರುದ್ರಪ್ಪನವರಿಗೆ ತೊಂದರೆ ಕೊಡುವ ಅನೇಕ ಪ್ರಯತ್ನಗಳು ನಡೆದುವು. ಆದರೆ ದೇಹದಾರ್ಢ್ಯತೆಯುಳ್ಳ ಆ ವ್ಯಕ್ತಿಯ ಎದುರು ವಿರೋಧಿಗಳ ಪ್ರಯತ್ನಗಳು ವಿಫಲವಾದವು. ಶ್ರೀ ರುದ್ರಪ್ಪನವರು ಬರಿ ಮೈಯಲ್ಲೇ ಸಿದ್ಧಗಂಗೆಗೆ ಹಿಂದಿರುಗಿದರು. ಅಲ್ಲಿ ಅವರು ಶ್ರೀ ಅಡವಿಸ್ವಾಮಿಗಳ ತೋರುಗದ್ದಿಗೆಯನ್ನು 'ರಚಿಸಲು ಪ್ರಯತ್ನಿಸಿ ಅದನ್ನು ಪೂರ್ಣಗೊಳಿಸಿದರು. ಇದನ್ನು ಸಹಿಸದ ಸುತ್ತಮುತ್ತಲಿನ ಜನರು ಕೋಪೋದ್ರಿಕ್ತರಾಗಿ ಶ್ರೀ ಕ್ಷೇತ್ರದಲ್ಲಿನ





## 'ಉದ್ದಾನ' : ಒಂದು ವಿವರಣೆ

ಸಿದ್ಧಗಂಗೆಯ ಶ್ರೀಮದುದ್ದಾನ ಶಿವಯೋಗಿಗಳವರು ತಮ್ಮ ಅಘಟಿತಘಟನಾಸಾಮರ್ಥ್ಯ, ನಿಗ್ರಹಾನುಗ್ರಹಶಕ್ತಿ ಹಾಗೂ ಶಿವಯೋಗದ ಬಲದಿಂದ ಈ ಲೋಕವನ್ನು ಸಂಗ್ರಹಿಸಿದ ಮಹಾಮಹಿಮರು. 'ಎಣ್ಣೆಬತ್ತಿಗಳುರಿದು ಲೋಕಕ್ಕೆ ಬೆಳಕನೀಯುವ ತೆರದಿ ತಮ್ಮೊಡಲ ಸತ್ಕ್ರಿಯೆಗಳಲ್ಲಿ ಸವೆಸಿದ ಶಿವಸಂಗಿಗಳು'. ಅವರು ಒಳಗೆ ಬಯಲಭಾವ ಸಂಪನ್ನರಾಗಿದ್ದು ಕೊಂಡು ಹೊಡಕೆ ಲೋಕಸಂಗ್ರಹತತ್ಪರಾಗಿದ್ದವರು. ಇಂಥ ಮಹಾಮಹಿಮರ ಹೆಸರೇ ಜ್ಞಾನ-ಕ್ರಿಯಾ ಸಮುಚ್ಚಯದಿಂದ ಸಂಪುಷ್ಟವಾದದ್ದು. ತತ್ರಾಪಿ 'ಉದ್ದಾನ' ಎಂಬ ಪದದಲ್ಲಿರುವ ಒಂದು ಅರ್ಥಪೂಜ್ಯತೆಯನ್ನು ಮನಗಾಣಬಹುದು.

**'ಉತ್'** ಎಂಬ ಉಪಸರ್ಗದೊಡನೆ ದಾನ (ಡು ದಾಞ ದಾನೇ) ಎಂಬ ಪದವು ಸೇರಿ 'ಉದ್ದಾನ' ಎಂಬ ಪದವು ರೂಪುಗೊಂಡಿದೆ. **'ಉತ್'** ಎಂಬುದಕ್ಕೆ ಶ್ರೇಷ್ಠವಾದ ಮತ್ತು ಅತಿಶಯವಾದ ಎಂಬ ಅರ್ಥಗಳಿವೆ. ಅದರಂತೆ **'ದಾನ'** ಶಬ್ದಕ್ಕೆ ದಾನಮಾಡು ಹಾಗೂ ರಕ್ಷಣೆ ಮಾಡು ಎಂಬೆರಡು ಅರ್ಥಗಳಿವೆ. ಆದ್ದರಿಂದ ಈ ಎರಡೂ ಅರ್ಥಗಳನ್ನು ಮೇಳವಿಸಿ ಶ್ರೇಷ್ಠವಾದ ಅನ್ನದಾನ ವಿದ್ಯಾದಾನ ಅಭಯಾದಿ ಸಾತ್ವಿಕ ದಾನಗಳಿಂದ, ವಾರ್ತೆಕೀರ್ತಿ ಸ್ವರ್ಗ ಪುಣ್ಯಾದಿಯಾವ ಫಲಾಪೇಕ್ಷೆಯಿಲ್ಲದೆ ಛಾತ್ರವರ್ಗ ಮತ್ತು ಸಮಾಜವನ್ನು ರಕ್ಷಣೆ ಭರಣೆ, ಮಾಡುತ್ತಿದ್ದುದರಿಂದ ಈ ಶಿವಯೋಗಿಗಳವರಿಗೆ 'ಉದ್ದಾನ' ಎಂಬ ಹೆಸರು ಅನ್ವರ್ಥವಾಗಿ ಸಲ್ಲುತ್ತದೆ.

**- ಕೋ.ರಂ. ಬಸವರಾಜು**

**ಅಡಿ ಟಿಪ್ಪಣಿ :**

1. ದಾನವನ್ನು ಸಾತ್ವಿಕದಾನ, ರಾಜಸದಾನ, ತಾಮಸದಾನ ಎಂಬುದಾಗಿ ಮೂರು ವಿಧ. ಸಾತ್ವಿಕದಾನ - ದೇಶಕಾಲ ಪಾತ್ರಗಳನ್ನರಿತು ಪ್ರತ್ಯುಪಕಾರ, ವಾರ್ತೆಕೀರ್ತಿಸ್ವರ್ಗ ಪುಣ್ಯಾದಿ ಯಾವ ಫಲಾಪೇಕ್ಷೆಯಿಲ್ಲದೆ ಮಾಡುವ ದಾನ.
ರಾಜಸದಾನ - ಫಲವನ್ನು ಅಪೇಕ್ಷಿಸಿ ಮಾಡುವ ದಾನ.
ತಾಮಸದಾನ - ಅಪಾತ್ರರಿಗೆ ಮಾಡುವ ದಾನ.
(ಭಗವದ್ಗೀತೆ ಅಧ್ಯಾಯ 17 ಶ್ಲೋಕಗಳು 20, 21, 22)
2. 'ಪ್ರಜಾನಾಂ ವಿನಯಾಧಾನಾತ್ ರಕ್ಷಣಾದ್ಭರಣಾದಪಿ
ಸಪಿತಾ ಪಿತರಸ್ತಾಸಾಂ ಕೇವಲಂ ಜನ್ಮಹೇತವಃ'
(ರಘುವಂಶ - ಪ್ರ.ಸ.ಶ್ಲೋ.24) ಎಂಬ ಕಾಳಿದಾಸನ ಮಾತನ್ನು ಸ್ಮರಿಸಬಹುದಾಗಿದೆ.

ದೇವಸ್ಥಾನದ, ಸ್ವಾಮಿ ವಿಗ್ರಹದ ಕೈ ಕಾಲು ಮುರಿದು ಬಿಸುಟರು. ರುದ್ರಪ್ಪನವರಿಗೆ ಉತ್ತರಾಧಿಕಾರ ಸಲ್ಲದೆಂದು ಹಟ ಹಿಡಿದರು. ಶ್ರೀ ಅಡವೀಸ್ವಾಮಿಗಳು ವಿಧ್ಯುಕ್ತವಾಗಿ ಇವರಿಗೆ ಆಶ್ರಮವೀಯದೆ ಶಿವೈಕ್ಯರಾದುದರಿಂದ ಜನರಿಗೆ ದಿಕ್ಕುತೋಚದಂತಾಗಿದ್ದಿತು. ಅಲ್ಲಿಯೂ ಪಕ್ಷಗಳು ಪ್ರಾರಂಭವಾಗಿ ಬಂಡೇಮಠದ ಚರಮೂರ್ತಿಗಳಿಂದ ಶ್ರೀ ರುದ್ರಪ್ಪನವರಿಗೆ ಶ್ರೀ ಸಿದ್ಧಗಂಗಾ ಕ್ಷೇತ್ರದ ಉತ್ತರಾಧಿಕಾರ ಕೊಡಿಸಿದರು. ಮೊದಲಿನ ರುದ್ರಪ್ಪ ಶ್ರೀ ಸಿದ್ಧಗಂಗಾ ಕ್ಷೇತ್ರದ ಶ್ರೀ ಅಡವಿಸ್ವಾಮಿಗಳ ಉತ್ತರಾಧಿಕಾರಿಗಳಾದರು. ಅಂದಿನಿಂದ ಅವರು ಶ್ರೀ ಮನ್ನಿರಂಜನ ಉದ್ದಾನ ಶಿವಯೋಗಿ ಗಳೆಂದು ಪ್ರಸಿದ್ಧರಾದರು.

ಬಾಲಾವಸ್ಥೆಯಿಂದ ಈವರೆಗೆ ಇವರನ್ನು ಎದುರಿಸಿದ ಘಟನೆಗಳು ಇವರ ವೀರವಿರಕ್ತಿ, ಆಧ್ಯಾತ್ಮಿಕ ತೇಜೋವಿಶೇಷ ಮತ್ತು ತಪೋನಿಷ್ಠೆಗಳನ್ನು ಹಾಗೂ ಇವರ ಮುಖ್ಯವಾದ ಮುನಿವ್ರತ ಮತ್ತು ಮುಖಮುದ್ರೆಗಳನ್ನು ಪರಿಸ್ಫುಟಗೊಳಿಸುವ ಘನ ಉದ್ದೇಶದಿಂದಲೇ ನಡೆದುವು. ಆದರೆ ಎಲ್ಲವನ್ನೂ ರೂಪಿಸುವ ಭವ್ಯಭವಿಷ್ಯದಲ್ಲಿ ಅವೆಲ್ಲವೂ ಬಂದು ಸುಳಿದು ಹೋಗುವ ಅಭ್ಯಾಸ ಪ್ರಾಯೆಯಂತೆ ಕಂಡೂ ಕಾಣದಾದವು.

**ಮಠಾಧಿಪತ್ಯದ ಕಠಿಣಪರೀಕ್ಷೆ**

ಮುನಿಗಳಾಗಿದ್ದು ಕಾರಣಪುರುಷರಾಗಿದ್ದರೂ ಸಹ ಮಾನವ ಸಹಜವಾದ ಕಾಠಿಣ್ಯ, ಕಾರ್ಪಣ್ಯಗಳು ಋಷಿಜೀವಿಗಳನ್ನು ಬಿಡಲಿಲ್ಲ. ಪಕ್ಷ ವಿಪಕ್ಷ ವಿಪ್ಲವಗಳ ನಡುವೆ ಮಠಾಧಿಪತ್ಯವನ್ನು ವಹಿಸಿಕೊಂಡ ಆದರ್ಶ ಮುನಿವ್ರತಿಗಳಾದ ಶ್ರೀ ಉದ್ದಾನಗುರುಗಳನ್ನು ವಿಧಿನಿಯಮಗಳು ಕಾಡತೊಡಗಿದವು. ಅನ್ನದಾನಕ್ಕೆ ಅವಕಾಶವಿಲ್ಲ. ವಿದ್ಯಾದಾನಮಾಡಲು ಅನುಕೂಲಗಳಿಲ್ಲ. ಸ್ಥಾನದಲ್ಲಿ ಸುಖವಿಲ್ಲ. ಶಾಂತಿಯಿಲ್ಲ. ಎಲ್ಲೆಲ್ಲೂ ವಿಪ್ಲವ. ಮಠಗಳನ್ನೂ ಮಠಾಧಿಪತಿಗಳನ್ನೂ ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ನೋಡಿ ಅವರ ಆತ್ಮಪರೀಕ್ಷೆ ಮಾಡಿ ನೋಡಬೇಕು. ಗುರುಗಳು ಹುಬೆ ಚೀಲವನ್ನು ಹೊತ್ತು ಭಿಕ್ಷೆಗಾಗಿ ಪಾದಯಾತ್ರೆ ಹೊರಟರು. ಮೊದಮೊದಲು ಗಣನೆಗೆ ತಾರದ ಜನರಿಂದ "ಮುಂದಕ್ಕೆ ಹೋಗಿ" ಎನ್ನುವುದನ್ನು ಕೇಳಿಯಾಯ್ತು. ಆದರೆ ಕಾಲಕ್ರಮೇಣ ಆತ್ಮಶಕ್ತಿಗಾಗಿ ಗುರುಕೃಪೆಯು ವಜ್ರಕವಚವಾಯಿತು. ಬ್ರಹ್ಮರಾಕ್ಷಸ ಘಟನೆ, ದೆವ್ವಪೀಡೆ - ಉಪಟಳ ಇವುಗಳಿಂದ ಬಿಡುಗಡೆ. ಈ ವಿಚಾರ ಶ್ರೀಗಳವರ ಮಹಿಮಾ ಜೀವನಕ್ಕೆ ಸ್ವಲ್ಪ ಮಟ್ಟಿಗೆ ಮೊದಮೊದಲು ನೆರವಾದವು. ಅವರ ಆದರ್ಶ, ನಿಗರ್ವ, ಆಚಾರವಿಚಾರ

ಸವುಗಳಿಂದಾಗಿ ಬರಬರುತ್ತ ಶ್ರೀ ಸಿದ್ಧಗಂಗಾ ಕ್ಷೇತ್ರವು ಆದರ್ಶ ಪಾವನ ಕ್ಷೇತ್ರವಾಯಿತು. ಶಿವಯೋಗಿಗಳು ಮಹಾಮಹಿಮರಾಗಿ ಕಾಣಿಸತೊಡಗಿದರು.. ಅನಂತರ ಶ್ರೀಗಳವರಿಂದ ದಿನೇ ದಿನೇ ರೂಪುಗೊಂಡ ಕಟ್ಟಡ, ಅನ್ನದಾನ, ವಿದ್ಯಾ ದಾನ, ಆದರ್ಶದ ನೀತಿನಿಯಮಗಳು ಜನಮನದಲ್ಲಿ ಅದ್ಭುತ ಪರಿಣಾಮಗಳನ್ನು ಬೀರತೊಡಗಿದುದರ ಕಾರಣವಾಗಿ ಎಲ್ಲರೂ ಭಕ್ತಿಯಿಂದ ನಡೆಯುತ್ತ ನೆರವಾಗತೊಡಗಿದರು. ಅವರ ಆ ಲೋಕೋಪಕಾರಕ ಕಾರ್ಯಗಳು ಅಚ್ಚಳಿಯದ ಶಿಲಾಶಾಸನಗಳಂತಿವೆ. ಧನ, ದವಸ ಮೊದಲಾದುವುಗಳ ಅಭಾವ ತಾನಾಗಿ ಕರಗಿ ಬಹುಧಾನ್ಯ, ಬಹುಧನಗಳಿಗೆ ಅವಕಾಶ ಮಾಡಿಕೊಟ್ಟಿತ್ತು, ಅವರ ಮಹಿಮಾತಿಶಯ. **'ಆದಾನಂ ಹಿ ವಿಸರ್ಗಾಯ'** ದಾನಕ್ಕಾಗಿಯೇ ಪರಿಗ್ರಹ. ಇದು ಶ್ರೀ ಸಿದ್ಧಗಂಗಾ ಕ್ಷೇತ್ರದ ಮೂಲಮಂತ್ರ. ಇವರೊಡನೆ ಈವರೆಗೂ ಪರಂಪರೆಯಿಂದ ಅಲ್ಲಿಗೆ ಬಂದಿರುವ ಆದರ್ಶ ಗುರುಮೂರ್ತಿಗಳು ಅದಕ್ಕೆ ತಾರಕಮಂತ್ರವಾಗಿದ್ದಾರೆ.

**ಉತ್ತರಾಧಿಕಾರ**

ತಮ್ಮ ೨೫ನೇ ವಯಸ್ಸಿನಿಂದ ೮೦ ವರ್ಷಗಳ ಕೊನೆಯವರೆಗೂ ಉದ್ಧಾನಶಿವಯೋಗಿಗಳು ಅನ್ವರ್ಥನಾಮ ಪಡೆದು ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ಆದರ್ಶಕ್ಷೇತ್ರವನ್ನಾಗಿ ಮಾಡಿದರು. ಈ ಸಮಯದಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನ ಅಲೇನಹಳ್ಳಿಯಿಂದ ಅಭ್ಯಾಸ ಮಾಡಲು ಬಂದ ಶ್ರೀ ಮರುಳಸಿದ್ಧಯ್ಯ ಎಂಬ ವಟುವು, ಶ್ರೀ ಮರುಳಾರಾಧ್ಯ ಎಂಬ ಹೆಸರಿನಿಂದ ಶ್ರೀ ಉದ್ಧಾನಶಿವಯೋಗಿಗಳ ಉತ್ತರಾಧಿಕಾರಿಗಳಾದರು. ಸುಮಾರು ಹತ್ತು ವರ್ಷಗಳ ಕಾಲ ವೇದ, ಸಂಸ್ಕೃತಿಗಳಲ್ಲಿ ಉತ್ತಮ ಪಾಂಡಿತ್ಯ ಪಡೆದು ಉತ್ತಮ ವಾಗ್ಮಿಗಳೂ, ವಾಚಾಳಿಗಳೂ ಆದ ಶ್ರೀ ಮರುಳಾರಾಧ್ಯರು ಹಿರಿಯ ಗುರುಗಳಿಗೆ ಮೆಚ್ಚುಗೆಯ ಶಿಷ್ಯರಾದರು.

**ಪುನಃ ಉತ್ತರಾಧಿಕಾರಿ :**

೧೯೩೦ರಲ್ಲಿ ಶ್ರೀ॥ ನಿ॥ ಪ್ರ॥ ಸ್ವಾ॥ ಶ್ರೀಮರುಳಾರಾಧ್ಯರು ಶಿವೈಕ್ಯರಾದ ಮೇಲೆ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ ಉದ್ಧಾನಸ್ವಾಮಿಗಳು ಸಮಚಿತ್ತರಂತೆ ಕಂಡುಬಂದರು. ಆ ವರ್ಷದ ಜಾತ್ರೆ ನಡೆಯುವ ಮೊದಲು ಶ್ರೀ ಮರುಳಾರಾಧ್ಯರ ಸಮಾಧಿಕಾರ್ಯಗಳು ನಡೆಯುತ್ತಿರುವಾಗ ಹಠಾತ್ತನೆ ಶ್ರೀ ಶಿವಣ್ಣನವರು ಅವರ ದೃಷ್ಟಿಗೆ ಬಿದ್ದರು. ಶ್ರೀ ಶಿವಣ್ಣನವರು ಶಿವಗಂಗೆಯ ಹತ್ತಿರದ ವೀರಾಪುರದ ನಿವಾಸಿಗಳು. ಶ್ರೀಗಳು ಅವರನ್ನೇ ತಮ್ಮ ಕೃಪಾಪಾತ್ರರಾಗಲು ಅರ್ಹರೆಂದು ದಿವ್ಯದೃಷ್ಟಿಯಿಂದ ಕಂಡಿದ್ದರು. ಶ್ರೀ ಮರುಳಾರಾಧ್ಯರ ಸಮಾಧಿವೇಳೆಯಲ್ಲಿ ಶ್ರೀ ಶಿವಣ್ಣನವರಿಗೆ ಉದ್ಧಾನಸ್ವಾಮಿಗಳು 'ಶಿವಣ್ಣ! ನಮಸ್ಕಾರ ಹಾಕು' ಎಂದು ಪೂರ್ವಸೂಚನೆಯಿಲ್ಲದೆಯೇ ಅಪ್ಪಣೆ ಮಾಡಿದರು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎ ಗೆ ವ್ಯಾಸಂಗ ಮಾಡುತ್ತಿದ್ದ ಶ್ರೀ ಶಿವಣ್ಣನವರು ಸಮಾಧಿ ಕಾರ್ಯದಲ್ಲಿ ಪಾಲ್ಗೊಳ್ಳಲು ಬಂದಿದ್ದರು. ಬಿ.ಎ. ಪರೀಕ್ಷೆಗೆ ಕುಳಿತುಕೊಳ್ಳಬೇಕಾಗಿದ್ದ ಅವರು ಶ್ರೀಗಳ ಅಪ್ಪಣೆಯನ್ನು ಮೀರಲಾಗದೆ ತಾಯಿ ತಂದೆಗಳ ಅಪ್ಪಣೆಯನ್ನು ಪಡೆಯಲು ಅವಕಾಶವಿಲ್ಲದೆ ಒಪ್ಪಬೇಕಾದ ಪರಿಸ್ಥಿತಿಯುಂಟಾಯಿತು. ಮುನಿವ್ರತವೋ, ವೀರವಿರಕ್ತಿಯೋ ಯೋಗಸಿದ್ಧಿಯೋ ಅಂತೂ ಶ್ರೀಗಳ ಅಪ್ಪಣೆಯನ್ನು ಮೀರುವಂತೆಯೇ ಇಲ್ಲ. ಅವರ ಆಜ್ಞೆಯಂತೆ ನಮಸ್ಕಾರ ಮಾಡಿದರು. ಆ ವರ್ಷದ ಜಾತ್ರೆಯಲ್ಲೇ ಅವರ ಆಶ್ರಮಸ್ವೀಕಾರ ಜರುಗಿತು. ಸುಮಾರು ೧೧ ವರ್ಷಗಳು ಶ್ರೀಮನ್ನಿರಂಜನ ಉದ್ಧಾನ ಶಿವಯೋಗಿಗಳ ಮಾರ್ಗದರ್ಶನವು ನೂತನ ಶ್ರೀಗಳಿಗೆ ದೊರಕಿತು. ಶ್ರೀ ಶಿವವಣ್ಣನವರು ಶ್ರೀ ಸಿದ್ಧಗಂಗಾಕ್ಷೇತ್ರದಲ್ಲಿ ಶ್ರೀ ಮನ್ನಿರಂಜನ ಪ್ರಣವ ಸ್ವರೂಪಿ ಶ್ರೀ ಶಿವಕುಮಾರಸ್ವಾಮಿಗಳೆಂಬ ದಿವ್ಯನಾಮಾಂಕಿತರಾದರು.

**"ಹರ ತನ್ನ ಭಕ್ತರ ತಿರಿವಂತೆ ಮಾಡುವ;**
**ಒರೆದು ನೋಡುವ ಸುವರ್ಣದ ಚಿನ್ನದಂತೆ,**
**ಅರೆದು ನೋಡುವ ಕಬ್ಬಿನ ಕೋಲಿನಂತೆ;**
**ಅರಿದು ನೋಡುವ ಶ್ರೀಗಂಧದಂತೆ,**
**ಬೆದರದೆ ಬೆಚ್ಚದೆಯಿದ್ದರೆ ಕರವಿಡಿದೆತ್ತಿಕೊಂಬ ರಾಮನಾಥ"**

ಎಂಬಂತೆ ಕೆಲವು ಕಾಲ ಕಳೆದ ಮೇಲೆ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಶಿವಕುಮಾರಸ್ವಾಮಿಗಳ ಅಧಿಕಾರವಧಿಯಲ್ಲಿ ಶ್ರೀಕ್ಷೇತ್ರದ ಸುವರ್ಣಯುಗವು ಆರಂಭವಾಯಿತು. ಕಾಲವು ಹೇಗೇ ಇರಲಿ, ವಿದ್ಯಾರ್ಥಿಗಳ ಸಂಖ್ಯೆ ೧೦೦ ರಿಂದ ೪೦೦೦ಕ್ಕೇರಿತು. ಅನ್ನದಾನ ಮಿಗಿಲಾಯಿತು. ಮಾಧ್ಯಮಿಕ ಶಾಲೆಗಳು, ಪ್ರೌಢಶಾಲೆಗಳು ಈ ಕ್ಷೇತ್ರದಲ್ಲೂ ಕ್ಷೇತ್ರದ ವತಿಯಿಂದ ಬೇರೆ ಬೇರೆ ನಗರ ಗ್ರಾಮಗಳಲ್ಲೂ ಪ್ರಾರಂಭವಾದವು. ತುಮಕೂರಿನಲ್ಲಿ ಒಂದು ಸೈನ್ಸ್ ಕಾಲೇಜು, ಅದಕ್ಕೂ ಮಿಗಿಲಾಗಿ ಒಂದು ಇಂಜಿನಿಯರಿಂಗ್ ಕಾಲೇಜು ಸಹ ಪ್ರಾರಂಭವಾಯಿತು. ದೇಶ ಆಹಾರ ಧಾನ್ಯಗಳ ವಿಷಯದಲ್ಲಿ ಕಷ್ಟಕ್ಕೆ ಗುರಿಯಾಗಿದ್ದರೂ ಶ್ರೀ ಶಿವಕುಮಾರಸ್ವಾಮಿಗಳ ಕ್ಷೇತ್ರಾಭಿವೃದ್ಧಿ ಕಾರ್ಯಕ್ರಮಗಳಿಗೆ ಯಾವುದೇ ರೀತಿಯ ಅಡೆತಡೆಗಳುಂಟಾಗಲಿಲ್ಲ. ಶ್ರೀಗಳವರ ಪ್ರಭಾವ ಪ್ರತಿಭೆಗಳು ದೇಶದ ಸಾಮಾಜಿಕ ವಿಷಯಗಳಲ್ಲಿ





ಪ್ರವೇಶಮಾಡಿ ಅವರ ಅಭ್ಯುದಯಕ್ಕಾಗಿ ದಾರಿ ಮಾಡಿದವು. ಒಟ್ಟಿನಲ್ಲಿ ಶ್ರೀ ಶಿವಕುಮಾರಸ್ವಾಮಿಗಳು ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಸುವರ್ಣಯುಗವನ್ನು ಪ್ರಾರಂಭಿಸಿ ಅಭಿವೃದ್ಧಿಗೊಳಿಸಿದರು. ಒಂದು ಮಾತಿನಲ್ಲಿ ಹೇಳುವುದಾದರೆ ಶ್ರೀ॥ ನಿ॥ ಪ್ರ॥ ಸ್ವಾ॥ ಶಿವಕುಮಾರಸ್ವಾಮಿಗಳನ್ನು ಪೂಜೆಗೆ ಬಿನ್ನಹ ಹಾಕುವುದು. ಭಾಷಣಕ್ಕೆ ಆಹ್ವಾನಿಸುವುದು ನ್ಯಾಯತೀರ್ಪಿಗೆ ಆಹ್ವಾನಿಸುವುದು ಇತ್ಯಾದಿಗಳೆಲ್ಲ ಜನಸ್ತೋಮಕ್ಕೆ ಒಂದು ಹೆಮ್ಮೆಯ ಕೆಲಸವಾಯಿತು. ವೀರವಿರಕ್ತರೂ ಶಾಂತಿಸಾಗರರೂ ಆದ ಶ್ರೀಗಳು ಎಲ್ಲವನ್ನೂ ಸಮದೃಷ್ಟಿಯಲ್ಲಿ ನೋಡಿ ತಮ್ಮ ಭಾಷಣದಲ್ಲಿ ಕೀರ್ತಿ ಪಡೆದರು. ಯಾವ ನ್ಯೂನತೆಗೂ ಹೆದರಿ ಪರರನ್ನು ಬೇಡಿಲ್ಲ. ಯಾರನ್ನೂ ಬೇಡದಂತೆ ಶ್ರೀ ಗುರುವು ಅವರಿಗೆ ಅಭಯಹಸ್ತ ನೀಡಿದ್ದಾನೆ.

ಜಾತ್ರೆ ಸಮಯದಲ್ಲಿ ಊಟದ ಎಲೆಗಳು, ಅಕ್ಕಿ ಮೊದಲಾದ ದವಸಧಾನ್ಯ ಸಾಲದೆಬಂದಾಗ "ಸಿದ್ಧಲಿಂಗ ತರ್‍ತಾನೆ ಮಾಡ್ರೀ ಅಡಿಗೇನ" ಎಂದು ಹೇಳುತ್ತಿದ್ದರಂತೆ. ದವಸ ಧಾನ್ಯಗಳು ಅಚ್ಚರಿಪಡುವಂತೆ ತುಂಬುತ್ತಿದ್ದುವು. ಅಂಥ ವಾಕ್ಸಿದ್ಧಿ, ವಾಕ್‌ಶಕ್ತಿ ಅವರಲ್ಲಿದ್ದುದೇ ಇದಕ್ಕೆ ಕಾರಣ. ಅದಕ್ಕಾಗಿ ಹಲವಾರು ಜನರು ಅವರ ಬಳಿ ವರ ಬೇಡಿ ಸಿದ್ಧಿ ಪಡೆಯುತ್ತಿದ್ದರು.

**ಜಾತ್ರೆಯ ಸಂದರ್ಭ :** ಒಮ್ಮೆ ಸುತ್ತಮುತ್ತಲೂ ಪ್ಲೇಗು ಹರಡಿದ್ದರಿಂದ ಸರಕಾರ ಅನುಮತಿಯನ್ನು ನೀಡಿರಲಿಲ್ಲ. ಅದಕ್ಕಾಗಿ ಡೆಪ್ಯುಟಿ ಕಮಿಷನರ ಮೇಲೆ ಶ್ರೀಗಳ ಹಾರಾಟವೋ ಹಾರಾಟ. ಎಷ್ಟು ಹೇಳಿದರೂ ಅನುಮತಿಯಂತೂ ಸಿಗಲೇ ಇಲ್ಲ. ಇತ್ತ ಜಾತ್ರೆಗಾಗಿ ತಂದ ಪದಾರ್ಥಗಳೆಲ್ಲ ಹಾಳಾಗುವುದೆಂಬ ಖೇದ. ಅಂತೂ ಚಿಕ್ಕರಥದಲ್ಲೇ ಸ್ವಾಮಿಯ ಉತ್ಸವ ನಡೆಸಿಬಿಟ್ಟರು. ಶ್ರೀಗಳ ಆಧ್ಯಾತ್ಮದ ಶುದ್ಧಜೀವನದ ಬಗ್ಗೆ ಕೇಳಿ ತಿಳಿದಿದ್ದ ಡೆಪ್ಯುಟಿ ಕಮಿಷನರ್ ಅವರು, ತಾವೇ ಖುದ್ದಾಗಿ ಬಂದು 'ಸ್ವಾಮೀ! ಪ್ಲೇಗಿನ ಹಾವಳಿ ಇದೆ. ಜಾತ್ರೆ ನಿಲ್ಲಿಸಲಾಗಿದೆ' ಎಂದರು. ಶ್ರೀಗಳು 'ನಾನು ನಡೆಸಿಯೇ ನಡೆಸುತ್ತೇನೆ. ಇಲ್ಲಿ ನೋಡಿ ಈ ಅಕ್ಕಿ, ಕಾರದ ಪುಡಿ, ಇವನ್ನೆಲ್ಲ ಯಾರು ತಿನ್ನಬೇಕು' - ಎಂದು ಮುಂತಾಗಿ ಬಿಸಿಯಾಗೇ ಪ್ರಶ್ನಿಸಿದರು. ಅವರು ನಿರುತ್ತರರಾಗಿ ಸುಮ್ಮನೆ ಹೋದರು. ಜಾತ್ರೆ ನಡೆಯಿತು. ಅವರ ಅಲೌಕಿಕ ವರ್ತನೆಯ ಬಗ್ಗೆ ತಿಳಿದ ಇತರರು ಅಧಿಕಾರಿಗಳನ್ನು ಸಮಾಧಾನ ಪಡಿಸಿದರು. ವಿದ್ಯಾರ್ಥಿಗಳನ್ನು ಓದಿಸುವುದರಲ್ಲಿ ಶ್ರೀಗಳಿಗೆ ವಿಶೇಷ ಆಸಕ್ತಿ.

ಶ್ರೀಗಳಿಗೆ ತಮ್ಮ ಉತ್ತಾರಧಿಕಾರಿಗಳಲ್ಲಿ ಅನನ್ಯವಾದ ಪ್ರೀತಿ. ಬಂದವರಿಗೆಲ್ಲ 'ನಮ್ಮ ಸ್ವಾಮಿಗಳು' ನಮ್ಮ ಸ್ವಾಮಿಗಳು ಎಂದು ಪ್ರೀತಿಯಿಂದ ಹೇಳುತ್ತಿದ್ದರು. ಕಾಲವಿಲ್ಲ, ವೇಳೆಯಿಲ್ಲ. "ಸ್ವಾಮಿಗಳೇ! ಇಲ್ಲಿ ಬನ್ನಿ" ಎಂದು ಗೋಪ್ಯಗಳನ್ನೆಲ್ಲ ಹೇಳುತ್ತಿದ್ದರು. ಕಾಲಕ್ರಮೇಣ ಅವರ ಅಧ್ಯಾತ್ಮ ಜ್ಞಾನವನ್ನೆಲ್ಲ ಇವರಿಗೆ ಧಾರೆ ಎರೆದರು. ಅವರು ಲಿಂಗೈಕ್ಯರಾಗುವ ದಿನ ನಾವೆಲ್ಲ ವಾರ್ಷಿಕೋತ್ಸವಕ್ಕಾಗಿ ಆಟಪಾಟಗಳನ್ನು ನಡೆಸುತ್ತಿದ್ದೆವು. ಶ್ರೀಗಳು ಆಪ್ತರಾದ ಶ್ರೀ ಅನಂತರಾಮನ್ ಅವರಿಗೆ ತಾವೇ ಪತ್ರ ಬರೆದು 'ವಾರ್ಷಿಕೋತ್ಸವಕ್ಕೆ ನಾವು ಇರುವುದಿಲ್ಲ' ಎಂದಿದ್ದರು. ಇದರ ಅಂತರಾರ್ಥವನ್ನು ನಾವು ತಿಳಿದಿರಲಿಲ್ಲ. ಆದರೇನು, ಎಲ್ಲ ಮಿಂಚಿ ಹೋಗಿತ್ತು!

ಅಂತ್ಯದಲ್ಲಿ ಆಧ್ಯಾತ್ಮಿಕ ಮುಖ ಮುದ್ರೆಯಲ್ಲಿ ತಲ್ಲೀನರಾದಂತೆ ಕಂಗೊಳಿಸುತ್ತಿದ್ದ ಮಹಾವ್ಯಕ್ತಿಯ ಅಂತ್ಯದರ್ಶನ ಮಾಡಿ ಅವರ ಆಶೀರ್ವಾದ ಪಡೆದು, ಷಡಕ್ಷರಿ ಮಂತ್ರದ ಸಮೂಹಪಠನದಿಂದ ದಿಗಂತಗಳು ಮೊಳಗುತ್ತಿದ್ದಾಗ "ಮಹಾ ತಪಸ್ವಿ"ಯ ಪರಿನಿಷ್ಕ್ರಮಣವನ್ನು ಕಂಡೆವು. ೧೯೪೧ನೆಯ ಜನವರಿ ತಿಂಗಳ ೧೧ ನೆಯ ದಿನಾಂಕ ಶ್ರೀಮದ್ದಾನ ಗುರುಗಳ ಅವತಾರವು ಕೊನೆಗೊಂಡಿತು.

ಆದಿಯಿಂದ ಅಂತ್ಯದವರೆಗೂ ಅವರದು ಒಂದು ರೀತಿ ಹಮ್ಮುಬಿಮ್ಮುಗಳಿಲ್ಲದ ಲಿಂಗಸಮರ್ಪಿತ ಅರ್ಪಣಬುದ್ಧಿ ಅರ್ಪಣದಲ್ಲಿ ತನ್ನ ಪ್ರಾರ್ಥನೆ ಯಂತ್ರ. ಪ್ರಪಂಚವನ್ನು ಶಿವನು ನಡೆಸಲಿ ಎಂಬ ಹಟ. ಅದು ಎಷ್ಟರಮಟ್ಟಿಗೆ ಸಾಧ್ಯವೆಂದು ಅವರ ಕಲ್ಪನೆಯಿಲ್ಲ. ಗಂಡು ಹೆಣ್ಣು ಭೇದವಿಲ್ಲದೆ ಎಲ್ಲರೂ ಆದರ್ಶ ಅರ್ಪಣಭಾವದಿಂರಬೇಕೆಂಬ ಸಂಕಲ್ಪ ಅವರದು.

ಮಠಾಧಿಪತ್ಯ ವಹಿಸಿದ ಬಳಿಕ ಅವರ ಪ್ರಭಾವ ಅದಮ್ಯ. ಅಸಾಧಾರವಾಗಿತ್ತು. ಮಹಾಕ್ಷೇತ್ರವನ್ನು ಅತ್ಯುನ್ನತ ಮಟ್ಟಕ್ಕೇರಿಸಿ ಮುಂದುವರೆಸಬೇಕೆಂಬ ಉತ್ಕಟೇಚ್ಛೆ ಅವರದಾಗಿತ್ತು. ಹಣವನ್ನು ಸಂಗ್ರಹಿಸುವಾಗಲೂ ಅವರಿಗೆ ಸಾಕಾಗುವಷ್ಟು ಹಣ ಸಂಗ್ರಹವಾಗಲಿಲ್ಲ. ಆದರೂ ಶ್ರೀಗಳು ತಮ್ಮದೇ ಆದ ವಿಶಿಷ್ಟ ಜೀವನವನ್ನು ನಡೆಸಿ ತ್ರಿಕರಣಪೂರ್ವಕವಾಗಿ ಗುರುಲಿಂಗ ಜಂಗಮಾರ್ಚನೆಯಲ್ಲಿ ತನುಮನಧನಗಳನ್ನು ಸಮರ್ಪಿಸಿ ಪ್ರಥಮವರೇಣ್ಯರಾಗಿ ಬಂದಂತೆಯೇ ಪ್ರಮಥವರೇಣ್ಯ ಪ್ರಪಂಚಕ್ಕೆ ಹಿಂದಿರುಗಿದರು. ಅದನ್ನು ಬಲ್ಲವರು ಮಾತ್ರ ಬಲ್ಲರು. ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಅಚ್ಚಳಿಯದ ಭದ್ರಬುನಾದಿಯನ್ನು ಹಾಕಿ ಅದರ ಸರ್ವತೋಮುಖವಾದ ಅಭಿವೃದ್ಧಿಗೆ ಕಾರಣರಾಗಿ ಕಣ್ಮರೆಯಾದರು.

(ಕೃಪೆ : ಸಿದ್ಧಗಂಗಾ ಶ್ರೀ)

# ಮಹಿಮನ ಮಹಿಮೆ

ಇದೊ! ಶ್ರೀಗುರುಮಲ್ಲೇಶ ತವದಿವ್ಯ ಕೃಪಾರ್ಣವದಿಂ
ಉದಯಿಸಿ ಬಂದಿಹನ್ "ಮಹಿಮ" ನೆಂಬಭಿದಾನದಿಂ
ಮುದದಿಂ ಬಾಲಲೀಲೆಯೊಳ್ ನಲಿವಂ ಶ್ರೀಬಸವರಾಜಂ
ಸದಯಾಂತಃ ಕರುಣೆ ಜನಿಸಿ ಬಂದಂತೆವೋಲ್ ಎಸೆವಂ "ಮಹಿಮಂ" ॥೧॥

ಶ್ರೀ ಗುರುಮಲ್ಲೇಶ್ವರರಾ ಶತಮನೋತ್ಸವ ಸುಸಮಯದೊಳ್
ಶ್ರೀಮದಥಣಿ ಮುರುಘೇಂದ್ರ ಶಿವಯೋಗಿ, ಬಿಳೂರು ಶ್ರೀಗುರುಬಸವ
ಶ್ರೀರಾಜಯೋಗಿ, ಮೇಣ್ ಮರುಳಸಿದ್ಧಶಿವಯೋಗಿಗಳೆಂತಿವರಾ-
ಶ್ರೀಕೃಪಾಛತ್ರದೊಳ್ ನಕ್ಕುನಲಿದಾಡುವಂ ಮಮ "ಮಹಿಮನ್" ॥೨॥

ಮಮಕಿರಿಯಸುಪುತ್ರ "ಸಿದ್ಧರಾಮ" ನಾಗರತ್ನರಿವರ್
ಮಮತೆಯಾ ತಂದೆ ತಾಯಿಗಳೆನೆಲ್ ಕಿಲಿಕಿಲಿ ನಗುತಿಹನ್
ಕಮಲಮುಖಮಂಡಲವಾಂತು ಸಕಲರ್ಗೆ ಸಂತಸದಾ
ಅಮಮ! ಸುಧಾವೃಷ್ಟಿಗರೆಯುತಿಹನ್ ಶ್ರೀಗುರುಕರುಣೆಯಿಂ ಕೇಳ್ ॥೩॥

ಆಗಮಿಸಿಹಳವರಜ್ಜಿ ಹೂಬಳ್ಳಿಯಿಂ "ಮಹಾನಂದಾ" ಸಂತಸವಾಯಿತು!
ಸಾಗರೋತ್ಸಾಹದಿಂ ಹೃದಯದುಂಬಿ ಲಾಲಿಸಿ ಪಾಲಿಸುತಿಹಳ್
ಬಂಗಾರ ಮೈಬಣ್ಣದಾ "ಮಹಿಮ" ನಾ ಮೈಕಾಂತಿ ರವಿ-ಶಶಿಯವೋಲ್
ಕಂಗೊಳಿಪನ್ ಪರಶಿವನ ಕೃಪೆಯಿಂ "ಶ್ರೀಗುರುಮಲ್ಲೇಶ್ವರನಾಶಿರ್ವಾದದಿಂ ॥೪॥

ಮೂರುವರುಷ ತುಂಬಲಿರುವ "ಮಹಿಮ" ನಾಅಣ್ಣನೆನೆಮಹೇಶ!
ಸಾರಸದ್ಗುಣಕೋಶ ತನ್ನಯಾ ಕಿರಿಯ ಸಹೋದರನಂ ಕಂಡು ನಿತ್ಯ
ಪೂರ್ಣಾನಂದದೊಳ್ ಮುತ್ತಿಡುವಂವಂಶವೃಕ್ಷದಾಕುಡಿಗಳೆನಲಿವರ್
ಸಾರಶ್ರೀ ಸಿದ್ಧಗಂಗಾಧಿಪತಿ "ಬಸವಾವತಾರಿ" ಡಾ. ಶಿವಕುಮಾರ ಸ್ವಾಮೀಜಿ ಕೃಪೆಯಿಂ ॥೫॥

**- ಶ್ರೀ ಮೋಟಗಿ ಮಲ್ಲಿಕಾರ್ಜುನ,**
ಅಥಣಿ







# ಆದ್ಯವಚನಕಾರ ಜೇಡರ ದಾಸಿಮಯ್ಯ

**-- ಪ್ರೊ. ಆರ್. ರಾಚಪ್ಪ**
'ರಜತಗಿರಿ' 159, 7ನೇ ಬಿ ಮುಖ್ಯರಸ್ತೆ,
ವಿಜಯನಗರ ಎರಡನೇ ಹಂತ, ಬೆಂಗಳೂರು-40

ಕನ್ನಡ ಸಾಹಿತ್ಯಕ್ಕೆ ತನ್ನದೇ ಆದ ವೈಶಿಷ್ಟ್ಯಗಳಿವೆ. ಚಂಪು, ವಚನ, ರಗಳೆ, ಷಟ್ಪದಿ, ತ್ರಿಪದಿ, ಸಾಂಗತ್ಯ ಮೊದಲಾದ ಪ್ರಕಾರಗಳಲ್ಲಿ ಉದ್ದಾಮ ಸಾಹಿತ್ಯ ರಚಿಸಿ ಜಗತ್ತಿನ ಇತರ ಸಾಹಿತ್ಯಗಳಿಗೆ ಸಗಲೇಣೆಯಾಗಿ ನಿಲ್ಲುವಂತಹ ಗೌರವವನ್ನು ಪಡೆದಿದೆ. ಸಂಸ್ಕೃತ ಸಾಹಿತ್ಯದ ಚಂಪೂ ಪರಂಪರೆಯನ್ನು ಒಂದು ಸಮರ್ಥ ಅಭಿವ್ಯಕ್ತಿ ಮಾಧ್ಯಮವನ್ನಾಗಿಸಿ ಅನೇಕ ಮಹಾಕಾವ್ಯಗಳನ್ನು ಕೊಟ್ಟ ಕೀರ್ತಿ ಕನ್ನಡ ಕವಿಗಳದ್ದು. ಶಿಷ್ಟಛಂದಸ್ಸಿನಲ್ಲಿ ಕಾವ್ಯರಚಿಸಿ ಕೇವಲ ಪಂಡಿತ ಮಾನ್ಯವಾಗಿದ್ದ ಸಾಹಿತ್ಯವನ್ನು ಜನ ಸಾಮಾನ್ಯರ ಬಳಿಗೆ ತಂದಕೀರ್ತಿ ವಚನಕಾರರದು. ದೇವಭಾಷೆ ಜನ ಭಾಷೆಯಾಗದಿದ್ದಾಗ ಜನಭಾಷೆಯನ್ನೇ ದೇವಭಾಷೆಯ ಮಟ್ಟಕ್ಕೆ ಏರಿಸಿದ ಕೀರ್ತಿ ವಚನಕಾರರಿಗೆ ಮೀಸಲು. ತಾತ್ವಿಕ ಚಿಂತನೆ, ಜೀವನಾದರ್ಶ ಮತ್ತು ಮೌಲ್ಯಗಳು, ಸಾಮಾಜಿಕ ಸುಧಾರಣೆಗಳೊಂದಿಗೆ ಆತ್ಮೋದ್ಧಾರವನ್ನು ಸಾಧಿಸಿದ್ದು ವಚನ ಸಾಹಿತ್ಯ. ಅಮೀಬದಿಂದ ಮಾನವನವರೆಗೆ ಜೀವ ವಿಕಾಸವನ್ನು ವಿಜ್ಞಾನ ಹೇಳಿದರೆ, ಮಾನವನಾದ ಮೇಲೆ ಮುಂದೇನು? ಎಂಬ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿಯಿತು. ಆಗ ವಚನಕಾರರು ಮಾನವ ಮಹಾನುಭಾವನಾಗಬೇಕು ಎಂಬಂಶವನ್ನು ವಚನಗಳ ಮೂಲಕ ಸಾದರಪಡಿಸಿದರು. ಸಂಸ್ಕೃತ ಪಂಡಿತರಿಗೆ ಮಾತ್ರ ವೇದ್ಯವಾಗುತ್ತಿದ್ದ ಆಧ್ಯಾತ್ಮ ವಿಚಾರಗಳನ್ನು ಜೀವನಾದರ್ಶ ಮೌಲ್ಯಗಳನ್ನು ಸಾಮಾನ್ಯನ ಬಳಿಗೆ ತಂದು ಆತ ಮಹಾನ್ ವ್ಯಕ್ತಿಯಾಗುವಂತೆ ಆಗುವಂತೆ ಮಾಡಿದ್ದು ವಚನ ಸಾಹಿತ್ಯ.

ಈ ವಚನ ಸಾಹಿತ್ಯ ಆರಂಭವಾದುದು ಯಾವಾಗ ಎಂಬ ಪ್ರಶ್ನೆಗೆ ಉತ್ತರ ಸುಲಭವಲ್ಲ. ಈಗ ಇರುವ ಆಧಾರಗಳ ಮೇಲೆ ಸದ್ಯಕ್ಕೆ ಜೇಡರ ದಾಸಿಮಯ್ಯನೇ ಆದ್ಯ ವಚನಕಾರ ಎಂಬುದು ನಮ್ಮ ದೃಢ ನಿಲವು. 'ಶರಣರ ಸೂಳ್ನುಡಿ ಮೃಡಭಕ್ತರ ನುಡಿಗಡಣ' ಎಂಬ ಮಾತುಗಳು ದಾಸಿಮಯ್ಯನಲ್ಲಿ ಪ್ರಯೋಗವಾಗಿದ್ದು ಆತನಿಗಿಂತಲೂ ಪೂರ್ವದಲ್ಲಿ ವಚನಗಳಿದ್ದವೆಂದು ಊಹಿಸಲು ಅವಕಾಶವಿದೆಯಾದರೂ ಯಾವ ಶರಣನ ವಚನಗಳೂ ಉಪಲಬ್ಧವಿಲ್ಲ. ದಾಸಿಮಯ್ಯನಿಗಿಂತ ಪೂರ್ವದಲ್ಲಿ ಕೊಂಡಗುಳಿ ಕೇಶಿರಾಜ ಕೃತಿಗಳನ್ನು ರಚಿಸಿ ವೀರಶೈವ ಸಾಹಿತ್ಯಕ್ಕೆ ಆದ್ಯಕವಿ ಎಂದು ಸಾಬೀತಾಗಿದೆ. ಆದರೆ ಕೇಶಿರಾಜನು ವಚನಗಳನ್ನು ರಚಿಸಿರುವುದು ನಮಗೆ ತಿಳಿದು ಬಂದಿಲ್ಲ. ಮುಂದೆ ಸಾಕಷ್ಟು ಆಧಾರಗಳು ದೊರೆಯುವರೆಗೆ ಜೇಡರ ದಾಸಿಮಯ್ಯ ಮೊದಲನೆ ವಚನಕಾರನೆಂದು ಹೇಳದೆ ಗತ್ಯಂತರವಿಲ್ಲ.

ಜೇಡರ ದಾಸಿಮಯ್ಯನ ಕಥೆಯು ಪ್ರಾಚೀನ ಶಿಲಾ ಲೇಖ, ಅನೇಕ ಕನ್ನಡ ಸಂಸ್ಕೃತ ಕಾವ್ಯಗಳು, ಬಸವಣ್ಣ ಮೊದಲಾದವರ ವಚನಗಳಿಂದ ಪುಷ್ಟಿಗೊಂಡು ಜನ ಜನಿತವಾಗಿದೆ. ಈತನನ್ನು ಕುರಿತು ಸಿದ್ದಾಗಮ, ಬ್ರಹ್ಮಾಂಡ ಪುರಾಣಗಳಲ್ಲದೆ ದೇವರದಾಸಿಮಯ್ಯನ ಪುರಾಣ, ದೇವಾಂಗಪುರಾಣ, ದೇವರದಾಸಿಮಯ್ಯ ರಗಳೆ ಮೊದಲಾದ ಕೃತಿಗಳು ರಚಿತವಾಗಿರುವುದಲ್ಲದೆ ಶರಣರ ವಚನಗಳು, ಪಾಲ್ಕುರಿಕೆ ಸೋಮನಾಥನ ಬಸವ ಪುರಾಣ, ಭೀಮ ಕವಿಯ ಬಸವ ಪುರಾಣ, ವಿರೂಪಾಕ್ಷ ಪಂಡಿತನ ಚನ್ನಬಸವ ಪುರಾಣ, ಷಡಕ್ಷರ ಮಹಾಕವಿಯ ವೃಷಭೇಂದ್ರ ವಿಜಯಗಳಲ್ಲಿಯೂ ಈತನಿಗೆ ಸಂಬಂಧಿಸಿದ ಸಂಗತಿಗಳು ದೊರೆಯುತ್ತವೆ. ಈತನ ಬಗೆಗೆ ೧೧೪೮ರ **ಗೊಬ್ಬೂರು ಶಾಸನ,** ೧೧೯೫ರ **ಬಿದಿರೆ ಶಾಸನ,** ೧೧೯೭ **ರ ಚಿಕ್ಕಮದನೂರ ಶಾಸನ,** ೧೧೯೭ರ **ಕಿರಿಯಿಂಡಿ ಶಾಸನ** ೧೨೦೦ರ **ಅಬ್ಬಲೂರ ಶಾಸನ,** ೧೨೦೧ **ಗೀಜಗನ ಹಳ್ಳಿಯ ಶಾಸನ,** ೧೨೫೭ರ **ಹಿರಿಯೂರ ಶಾಸನ,** ೧೨೮೦ರ **ಮರಡೀಪುರ ಶಾಸನ ಮತ್ತು ಬನವಾಸಿಯ ಚಿತ್ರ ಶಾಸನಗಳಲ್ಲಿ ವಿವರಗಳನ್ನು ನೀಡಲಾಗಿದೆ.**

ಈ ಎಲ್ಲಾ ಆಧಾರಗಳನ್ನು ಅನುಲಕ್ಷಿಸಿ ಈತನ ಜೀವನವನ್ನು ಈ ರೀತಿ ಗುರ್ತಿಸಬಹುದು.

ಜೇಡರ ದಾಸಿಮಯ್ಯನ ಜನ್ಮಸ್ಥಳ ಈಗಿನ ಕಲ್ಬುರ್ಗಿ ಜಿಲ್ಲೆಯ ಸುರಪುರ ತಾಲ್ಲೂಕಿನ ಮುದನೂರು. ಇದು ರಾಮನಾಥದೇವಾಲಯ, ಮಲ್ಲಿಕಾರ್ಜುನ ದೇವಾಲಯ, ಲಿಂಗಪ್ಪದೇವಾಲಯ, ಗೋಪಾಲಸ್ವಾಮಿ ದೇವಾಲಯ,

ದಾಸಿಮಯ್ಯ ದೇವಾಲಯ. ಹಾಲು ತೀರ್ಥ, ಸಕ್ಕರೆ ತೀರ್ಥ, ಮರಳು ತೀರ್ಥ, ಪಾಂಡವ ತೀರ್ಥ, ರಾಮತೀರ್ಥ, ಲಕ್ಷ್ಮಣತೀರ್ಥ, ಸಂಗಮತೀರ್ಥಗಳೆಂಬ ಸಪ್ತ ತೀರ್ಥಗಳಿಂದ ಕೂಡಿ ದಕ್ಷಿಣವಾರಣಾಸಿ ಎಂದು ಪ್ರಸಿದ್ಧಿಹೊಂದಿತ್ತು. ಹರಿಹರನು ಶಿವಭಕ್ತಿ ಭೂಷಣರೆನಿಪ ಪುರಾತನವೃಂದಾಚಾರ ಭಕ್ತಿರಸ ಮಡುಗಟ್ಟಿದಂತಿರ್ದುದು ಎಂದು ಹಾಡಿ ಹೊಗಳಿಸಿದ್ದಾನೆ.

ಮುದನೂರಿನ ರಾಮಯ್ಯ - ಶಂಕರಿ ಎಂಬ ದಂಪತಿಗಳಿಗೆ ದಾಸಿಮಯ್ಯ ಮಗನಾಗಿ ಜನಿಸಿದನು. ಬಾಲ್ಯ ಕಳೆದು ಯುವಕನಾದ ದಾಸಿಮಯ್ಯ ಕುಲ ಕಸುಬಾದ ನೆಯ್ಗೆಯ ಕಾಯಕವನ್ನು ನಡೆಸಲಾರಂಭಿಸಿದನು. ತನ್ನ ಅಂತರಂಗದ ಹಸಿವನ್ನು ತಣಿಸಲು ಶ್ರೀಶೈಲದ ಚಂದ್ರಗುಂಡ ಶಿವಾಚಾರ್ಯರ ಬಳಿ ದೀಕ್ಷೆ ಪಡೆದು ಶಿವಜ್ಞಾನ ಸಂಪನ್ನನಾದನು. ತನ್ನ ಊರಿಗೆ ಬರುವಾಗ ಹಾದಿಯಲ್ಲಿ ಅನೇಕ ಜನರಿಗೆ ಶಿವಜ್ಞಾನ ಬೆಳಗನಿತ್ತು ಉದ್ಧರಿಸಿದನು. ಯೌವನಸ್ಥನಾದ ದಾಸಿಮಯ್ಯ ವಿವಾಹವಾಗಲು ನಿಶ್ಚಸಿ ಕನ್ಯಾರ್ಥಿಯಾಗಿ ಹೊರಟು ತನ್ನ ಉದ್ದೇಶಕ್ಕೆ ಹೊಂದಿಕೊಂಡು ಚಕಾರವೆತ್ತದ ನಡೆವವಳನ್ನು ವಿವಾಹ ವಾಗಲು ನಿರ್ಧರಿಸಿದನು. ಈತ ನಡೆಸಿದ ವಧುಪರೀಕ್ಷೆ ಅಲೌಕಿಕವಾದುದು. ಈ ವಿವರವನ್ನು ಶಾಂತಲಿಂಗ ದೇಶಿಕ ಮನೋಜ್ಞವಾಗಿ ನಿರೂಪಿಸಿದ್ದಾನೆ.

**"ಹಸ್ತದಲ್ಲಿ ಮಳಲೊಂದು' ಗಂಟು, ಅಕ್ಕಿಯನೊಂದು ರವೆಯಲ್ಲಿ ಗಂಟುಕಟ್ಟಿ ಕೊಂಡು ಕಬ್ಬಿನ ಕೋಲ ಹಸ್ತದಲ್ಲಿ ಪಿಡಿದುಕೊಂಡು, ಕಟ್ಟಿಗೆಯ ಮುಟ್ಟದೆ, ಕಿಚ್ಚನೊಟ್ಟಿ, ನೀರಮುಟ್ಟದೆ ಮಳಲಕ್ಕಿಯಂ ಪಾಯಸಮಾಡಿ ನೀಡಿದಡೆ ಅಂತಪ್ಪ ಸ್ತ್ರೀಯಂ ಮದುವೆಯಾಗುವನೆಂದು ದೇಶಾಂತರದಲ್ಲಿ ಮನೆಮನೆಯಲ್ಲಿ ಭಿಕ್ಷವಂ ಬೇಡುತ್ತ ಕೇಳುತಂ ಬರುತಿರಲು - ಇದನಾರು ಮಾಡಿ ನೀಡುವರೆಂದು ಜನರು ಬೆರಗಾಗಿ ನಗುತ್ತಿರಲು"** - ಈ ಮುಡಿಗೆಯನ್ನು ದುಗ್ಗಳೆ ಎಂಬ ಚತುರಕನ್ಯೆ ಬಿಡಿಸಿ ದಾಸಿಮಯ್ಯನ ಸತಿಯಾದಳು. ಇದು ದಾಸಿಮಯ್ಯನ ಪುಣ್ಯವೋ?. ಅಥವಾ ಈಶ್ವರ ಕೃಪೆಯೋ? ಅಂತು ಅನುಕೂಲ ಸತಿ ದೊರಕಿದಳು, ಹರಿಹರ -

**"ಆತಂಗೆ ಚಿತ್ತವಲ್ಲ ಭೆದುಗ್ಗಳಾದೇವಿ**
**ಮಾತಿಂಗೆ ಪ್ರತಿಶಬ್ದವಿಲ್ಲ ಸದ್ಗುಣ ಭಾವಿ**
**ಸತಿಪತಿಗಳಿಬ್ಬರೂ ಚಿತ್ತಬುದ್ಧಿಗಳಾಗೆ**
**ಅತಿಶಯ ಸದಾಚಾರ ತಮಗೆ ಸಂಪದವಾಗೆ"**

ಪುಣ್ಯ ದಾಂಪತ್ಯ ಸುಖವನ್ನನುಭವಿಸಿದರೆಂದು ವರ್ಣಿಸಿದ್ದಾನೆ.

ಇವರ ಸಂಸಾರ ಶಿವ ಸಾರವಾಯಿತು. ತಮ್ಮ ಕಾಯಕ. ಶಿವಾನುಭವದಿಂದ ಪರಿಶುದ್ಧ ಜೀವನದಿಂದ ಜನರ ಅಜ್ಞಾನವನ್ನು ನಿವಾರಿಸಿ ಸುಜ್ಞಾನದ ಜ್ಯೋತಿಯನ್ನು ಬೆಳಗಿ ಕ್ರಾಂತಿಯ ಕಿಚ್ಚನ್ನು ಹಚ್ಚಿದರು.

ಇವರಸತ್ವ ಪರೀಕ್ಷೆಯ ಕಾಲ ಸಮೀಪಿಸಿತು. ಒಮ್ಮೆ ದಾಸಿಮಯ್ಯ ದಿವ್ಯವಾದ ಅಂಬರವನ್ನು ನೇಯ್ದು ಸಂತೆಯಲ್ಲಿ ಮಾರಾಟಕ್ಕೆ ಒಯ್ದನು. ಆ ದಿವ್ಯ ವಸ್ತ್ರವನ್ನು ಸಂತೆಯಲ್ಲಿ ಯಾರೂ ಕೊಳ್ಳುವ ಸಾಹಸ ಮಾಡಲಿಲ್ಲ. ಇಂದಿನ ದಾಸೋಹಕ್ಕೆ ಅಡ್ಡಿಯಾಯಿತೆಂದು ಹಿಂತಿರುಗಿ ಬರುವಾಗ ವೃದ್ಧ ಜಂಗಮನೊಬ್ಬನು ಬಂದು ತನಗೆ ತುಂಬಾ ಚಳಿಯಾಗುವುದೆಂದು ಹೊದೆಯಲು ಬಟ್ಟೆಯೊಂದನ್ನು ಕೊಡಬೇಕೆಂದು ಕೇಳುವನು. ದಾಸಿಮಯ್ಯ ವೃದ್ಧ ಜಂಗಮನ ಚಳಿಯ ಹಿಂಸೆಯನ್ನು ಸಹಿಸಲಾರದೆ ಮಾರಾಟವಾಗದ ದಿವ್ಯಾಂಬರವನ್ನೇ ದಾನಮಾಡಿದನು. ಆ ಜಂಗಮ ದಿವ್ಯಾಂಬರವನ್ನು ಹರಿದು ಚಿಂದಿ ಮಾಡಿ ತಲೆ, ಕೈ ಕಾಲು, ಸೊಂಟಗಳಿಗೆ ಸುತ್ತಿಕೊಂಡನು. ಇದನ್ನು ಕಂಡ ದಾಸಿಮಯ್ಯ ಸ್ವಲ್ಪವೂ ವಿಚಲಿತನಾಗಲಿಲ್ಲ. ಇವನ ದೃಢತೆಯನ್ನು ಮೆಚ್ಚಿದ ಶಿವ ಇವನಿಗೆ 'ತವನಿಧಿ'ಯನ್ನು ಇತ್ತು ಬಯಲಾದ .ತವನಿಧಿಯಿಂದ ದಾಸಿಮಯ್ಯ ನಿತ್ಯವೂ ದಾಸೋಹ ನಡೆಸುತ್ತಿದ್ದನು. ಇದರಿಂದ ದಾಸಿಮಯ್ಯನಲ್ಲಿ ಶಿವನಂತೆ ಕೊಡುವವರೂ ತನ್ನಂತೆ ಪಡೆದವರೂ 'ಇಲ್ಲ' ಎಂಬ ಗರ್ವಮೂಡಿತು. ಈ ಗರ್ವವನ್ನು ಮುರಿಯಲೆಂದೇ ಶಂಕರದಾಸಿಮಯ್ಯನೆಂಬ ಸೂಜಿಕಾಯಕದ ಶರಣ ಮುದನೂರಿಗೆ ಆಗಮಿಸಿದ. ಇದನ್ನು ತಿಳಿದು ಜೇಡರದಾಸಿಮಯ್ಯ ಪುಳಕಿತನಾಗಿ ಶಂಕರದಾಸಿಮಯ್ಯನ ಬಳಿಹೋಗಿ ಶಿವಾನುಭವ ಸದ್ಗೋಷ್ಠಿಯಲ್ಲಿ ಕಾಲ ಕಳೆಯುವನು. ಇಂತಿರಲು ಒಮ್ಮೆ ಗೋಷ್ಠಿ ನಡೆಯುವಾಗ ಶಂಕರದಾಸಿಮಯ್ಯ ತನ್ನ ಶಿಷ್ಯರನ್ನು ಕುರಿತು **'ಎಲೆ ಮಗನೆ ಧಾನ್ಯಕ್ಕೆ ಬಿಜಯಂಗೆಯ್'** ಎಂದು ಆಜ್ಞಾಪಿಸುವನು. ಇದನ್ನು ಕಂಡು **'ಶಿವಕಾರುಣ್ಯ ಸಗರ್ವಹೃದಯ'**ನಾಗಿದ್ದ ಜೇಡರ ದಾಸಿಮಯ್ಯ ಮುಂದಾಲೋಚನೆಯಿಲ್ಲದ ಶಿವಭಕ್ತರಿಗಿಂತ ಸಿರಿವಂತರಿಲ್ಲವೆಂಬುದನ್ನು ಅರಿಯದೆ. -

**"ದೇವರಾರೋಗಣೆಗೆ ಧಾನ್ಯವಂತರ ಪುಗಲೇಕೆ? ಎನ್ನ ಮನೆಯೊಳ್ ಸುಕುಮಾರ ಕಳಮಾದಿಗಳುಂಟು ಇಲ್ಲಿ ನೀವಿಪಿರ್ಪನ್ನೆವರಂ ಧಾನ್ಯಕ್ಕೆ ಪೋಗಲಾಗದು. ನಿರೋಧಂ ಬೇಡ ಹತ್ತು ಇಪ್ಪತ್ತುನಲ್ಲ, ಹೇರಂ ಕಳಿಪುವೆಂ ಅವಂ ಕೈಕೊಳ್ವುದು"** ಎಂದು ಹೇಳುವನು.

ಇಂತಹ ಹಮ್ಮಿನ ಮಾತುಗಳಿಗಾಗಿಯೇ ಕಾಯ್ದುಕೊಂಡಿದ್ದ ಶಂಕರ ದಾಸಿಮಯ್ಯ, ಆತನನ್ನು ದಿಟ್ಟಿಸಿನೋಡುತ್ತಾ ಆಕ್ಷೇಪಣೆಗೆ ಒಂದಿಷ್ಟು ಕೋಪವನ್ನು ಬೆರಸಿ. ಮುಖದಲ್ಲಿ ಮುಗುಳ್ನಗೆಯನ್ನು ತಂದು ಕೊಂಡು -

**ಅಕ್ಕಕ್ಕು ಬಡ ಭಕ್ತರ್ಗೆಮನೆ ನೆಲ್ಲಲ್ಲಿರ್ಪುದು? ತಿರಂಚಿಯ ಶಿರಮಂ ಚಿವುಂಟಿ ಮೃತ್ಯುವಿನ ಮನೆಯಂ ಮುಕ್ತಿ ಹರಿಯನೊಸಲರುಣ ಜಲಯಂ ಬಿಕ್ಷಾಪಾತ್ರೆಯೊಳ್‌ವೇವಿ, ವಿಷ್ವಕ್ಸೇನನನಿರಿದೆತ್ತಿ ತಿರಿದಾಡಿದನ ಮಕ್ಕಳ್ಗೆ ಸಿರಿಯೆಲ್ಲಿಯದೆಲೆದಾಸ? ನೀಂಕೊಡುವವ ನಾಂಕೊಳ್ವವ**

ಉಂಟುಂಟು ಎಂದು ವ್ಯಂಗ್ಯೋಕ್ತಿಗಳನ್ನಾಡಿ ತನ್ನ ಬಿಡಾರದ ಮುಂದಿನ ತಿಪ್ಪೆಯನ್ನು ಅಗೆಸಿ ಅಲ್ಲಿದ್ದ ಹೊನ್ನಿ ಕಡವರಗಳನ್ನು ತೋರಿಸುತ್ತಾ

**"ನಿನಗೆ ಬೇಳ್ವನಿತಂ ಕೊಳ್ವುದೆಲೆದಾಸಕೊಳ್...... ನಿನ್ನ ನಾಲ್ವೆರಲ್ ನೆಲ್ಲಗೋಟಿಗೆ ತಕ್ಕಮುರುಕವಲ್ಲ. ತವ ನಿಧಿಯಂ ಕೊಟ್ಟ ದೇವ ತಾನೆ ಕೊಂಡಹಂ ನೀಂ ಪೋಗು"** ಎಂದು ನುಡಿವನು.

ಶಂಕರ ದಾಸಿಮಯ್ಯನ ಸಿಡಿಲನುಡಿಗೇಳ್ದು ಭಯದಿಂದ ವಿಹ್ವಲನಾಗಿ ಜೇಡರ ದಾಸಿಮಯ್ಯ ಮನೆಗೆ ಬರಲು ತವನಿಧಿ ಬತ್ತಿತ್ತು. ಇದನ್ನು ಕಂಡು ತಪ್ಪಿನರಿವಾಗಿ ಸತಿ-ಪತಿಗಳಿಬ್ಬರೂ ಪಶ್ಚಾತ್ತಾಪಗೊಂಡು ಮೆಯ್ಯಿಕ್ಕುತ್ತ ಶಂಕರದಾಸಿಮಯ್ಯನ ಬಳಿ ಬಂದು **"ಚಿತ್ತದ ಭಯವಮಂ ಮನದ ಲಲ್ಲೆಯಂ ಮುಖದ ಕಾರ್ಪಣ್ಯಮಂದಿಟ್ಟಿಯ ದೈನ್ಯಮುಮಂ"** ಬೆರಸಿ ಆತನ ಪದತಲದಲ್ಲಿ ಬಿದ್ದುದು **"ಕೃಪಾಸಮುದ್ರ ಕರುಣೆ, ಕರುಣಿಸುವು"** ಎಂದು ಬೇಡಿಕೊಂಡರು. ದಂಪತಿಗಳ ಈ ಸ್ಥಿತಿಯನ್ನು ಅರಿತ ಶಂಕರದಾಸಿಮಯ್ಯನು ಕರುಣಿಸಿ ಪ್ರಸನ್ನನಾಗಿ -

**"ರಾಮನಾಥಂಕೊಟ್ಟಪಾರ ತವನಿಧಿಯಂ ಒಳಗಣೆಂತೆಗೆ ತರ್ಪನೆಂಬ ಭ್ರಮೆಯುಂಬಿಟ್ಟು ಇಂದು ಮೊದಲಾಗಿ ಮೇಲಣೆಂದುರ್ಕುತ್ತೆ ಬರಲಿ"** ಎಂದು ಆಶೀರ್ವದಿಸುವನು. ಶಂಕರದಾಸಿಮಯ್ಯನ ಕೃಪೆಯಿಂದ ತವನಿಧಿ ಉಕ್ಕಿ ಹೊರಸೂಸಲಾರಂಭಿಸಿತು. ಸತಿಪತಿಗಳಿಬ್ಬರೂ ಅಹಂಕಾರ ವಿವರ್ಜಿತರಾಗಿ ಮೊದಲಿಗಿಂತಲೂ ಹೆಚ್ಚು ಧಾನ್ಯದಾನ, ಶಿವಾರಾಧನೆ. ಶಿವಗಣ ಸೇವೆಯಲ್ಲಿ ನಿರತರಾದರು.

ಒಮ್ಮೆ ಆ ಊರಿನ ವೈಷ್ಣವಬ್ರಾಹ್ಮಣರು ಶ್ರೀರಾಮ ನಾಥಾಲಯದ ಬಾಗಿಲನಿಕ್ಕಿ ಬೀಗಮುದ್ರೆಮಾಡಿದರು. ಅಲ್ಲಿಗೆ ಬಂದ ದಾಸಿಮಯ್ಯನನ್ನು ಕುರಿತು **'ವೀರಶೈವರು ಗುಡಿಯ ಲಿಂಗಕೆ ಕೈಮುಗಿವುದಿಲ್ಲ, ಬರುವುದೇತಕೆ'** ಎಂದು ಆಕ್ಷೇಪಿಸಿದರು. ಇವರ ಮಾತುಗಳನ್ನು ಕೇಳಿಸಿಕೊಳ್ಳದೆ ದಾಸಿಮಯ್ಯ ನೇರವಾಗಿ ದೇವಾಲಯದ ಬಾಗಿಲಬಳಿ ಬರಲು ಬೀಗಮುದ್ರೆಯೊಡೆದು ಕದವು ತೆರೆದುಕೊಂಡಿತು. ವಿಪ್ರರಮುಖಗಳು ಕಪ್ಪಿಟ್ಟವು.

ಜೇಡರದಾಸಿಮಯ್ಯನ ಸಂಸಾರ ಸುಖಮಯ ವಾಗಿದ್ದಿತ್ತೆನ್ನಲು ಧ್ವನಿಪೂರ್ಣ ಕಥೆಯೊಂದು ಹುಟ್ಟಿದೆ. ಒಮ್ಮೆ ಜಂಗಮರಿಬ್ಬರಲ್ಲಿ ಸಂಸಾರ ಹೆಚ್ಚೋ? ಸನ್ಯಾಸ ಹೆಚ್ಚೋ? ಎಂಬ ಬಗ್ಗೆ ಜಿಜ್ಞಾಸೆಯುಂಟಾಯಿತು. ಅವರಿಬ್ಬರು ದಾಸಿಮಯ್ಯನ ಬಳಿ ಬಂದು ತಮ್ಮ ಜಿಜ್ಞಾಸೆಯನ್ನು ಬಿನ್ನವಿಸಿಕೊಂಡರು. ದಾಸಿಮಯ್ಯ ಏನೂ ಮಾತನಾಡದೆ ಅವರಿಬ್ಬರನ್ನು ಮಗ್ಗದ ಬಳಿಕುಳ್ಳಿರಿಸಿ, ದುಗ್ಗಳೆಯನ್ನು ಕರೆದು **'ದಾರಹರಿದಿದೆ ದೀಪತಾ'** ಎನ್ನಲು ಆಕೆ ಉಸಿರೆತ್ತದೆ ದೀಪತಂದಳು. ತಲೆಯಬಳಿಯೇ ಕುಂಚಿಗೆ ಇರಲು **'ಕುಂಚಿಗೆಯನ್ನು ಕೊಡು'** ಎನ್ನಲು ಬಿರಬಿರನೆ ಬಂದು ಕುಂಚಿಗೆಯನೆತ್ತಿತಂದಿತ್ತಳು ಆ ಜಂಗಮರನ್ನು ಬಳಿಕುಳ್ಳಿರಿಸಿಕೊಂಡು ಊಟಮಾಡುತ್ತಾ **'ಮೊನ್ನೆ ಮಾಡಿದ ಅಂಬಲಿಸುಡುತ್ತಿದೆ'** ಎನ್ನಲು ಆಕೆ ಗಾಳಿಬೀಸಿದಳು. ಈತನ ಈ ವಿಲಕ್ಷಣ ವರ್ತನೆಯನ್ನು ಕಂಡು ಜಂಗಮರಿಬ್ಬರೂ ಆಶ್ಚರ್ಯ ಚಕಿತರಾದರು. ಆಗ ದಾಸಿಮಯ್ಯ ಅವರಿಬ್ಬರನ್ನು ಕುರಿತು. **"ಇಂತಹ ಹೆಣ್ಣು ಸಿಕ್ಕರೆ ಸಂಸಾರ ಲೇಸು, ಎದುರುತ್ತರ ಕೊಡುವ ಹೆಣ್ಣಾದರೆ ಸನ್ಯಾಸ ಲೇಸು"** ಎಂದನಂತೆ. ಇದರಿಂದ ನಮಗೆ ತಿಳಿದು ಬರುವ ಅಂಶವೆಂದರೆ ದಾಸಿಮಯ್ಯ ದಂಪತಿಗಳ ಅನ್ಯೋನ್ಯ ದಾಂಪತ್ಯ ಜೀವನ.

ಹನ್ನೆರಡನೆ ಶತಮಾನಕ್ಕೆ ಪೂರ್ವದಲ್ಲಿ ಶಿಷ್ಟರು. ಸುಸಂಸ್ಕೃತರು ಎನ್ನಿಸಿಕೊಂಡ ಮಹಾಜನರು (ಗಂಡಸರು ಮಾತ್ರ) ದೇವಮಂದಿರಗಳೂ, ದೈವ ಭಕ್ತಿಯೂ ತಮ್ಮ ಗುತ್ತಿಗೆಯೆಂದು ಸಾರುತ್ತ ತಮ್ಮ ಬೇಳೆ ಬೇಯಿಸಿ ಕೊಳ್ಳುತ್ತಿದ್ದರು. ವರ್ಣಭೇದ ನೀತಿ ತಾಂಡವವಾಡುತ್ತಾ ಜನ ಸಾಮಾನ್ಯರನ್ನು ತುಳಿತ್ತಳದುಳಿಯುತ್ತಿದ್ದ ಕಾಲವದು. ಹೆಣ್ಣಿಗಂತೂ ಅದು ಯಾವ ವರ್ಣದಲ್ಲಿಯೇ ಜನಿಸಿರಲಿ, ಆತ್ಮ ಕಲ್ಯಾಣಕ್ಕೆ ಅವಕಾಶವೇ ಇರಲಿಲ್ಲ. ಶ್ರೀಸಾಮಾನ್ಯನು ಹಲವು ಬಗೆಯ ಸಾಮಾಜಿಕ ಅನ್ಯಾಯಗಳಿಂದಾಗಿ ಆಧ್ಯಾತ್ಮಿಕ ಹಸಿವಿನಿಂದ ಕಂಗಾಲಾಗಿ ಪರಿತಪಿಸುತ್ತಿದ್ದ. ಆಗ ಜನತೆಯ ಆಶೋತ್ತರಗಳನ್ನು ಈಡೇರಿಸಲು ಜನತೆಯ ಮಧ್ಯದಿಂದಲೇ ಮೂಡಿಬಂದ ಮಹಾನಾಯಕ ಜೇಡರ ದಾಸಿಮಯ್ಯ. ಸವಿಗನ್ನಡದಲ್ಲಿ ನೇರಮಾತುಗಳಿಂದ ವಚನಗಳಲ್ಲಿ ನಡೆ, ನುಡಿ ಆಚಾರ. ಸದ್ಭಕ್ತಿಗಳನ್ನು ಬೋಧಿಸಿದ್ದಾನೆ. ನಡೆದು ತೋರಿದ್ದಾನೆ. ಈ ಬೆಳಕನ್ನು ಅನುಸರಿಸಿದ ಕನ್ನಡಿಗರ ಬದುಕು ಶಿವಮಯ ವಾಯಿತು.

ದಾಸಿಮಯ್ಯ ಬಸವ ಪೂರ್ವದ ಶರಣರಲ್ಲೆಲ್ಲಾ ಹಿರಿಯನಲ್ಲದಿದ್ದರೂ ಅತ್ಯಂತ ಹಿರಿಮೆಯುಳ್ಳವನು. ಮಹಾಜ್ಞಾನಿ. ಈತನಿಗೆ ಅಪಾರ ಶಿಷ್ಯಸಂಪತ್ತು ಇದ್ದಿತು. ಈತನಿಂದ ಜಾಡಕುಲ ದೇಸನಡದಿತ್ತು. ಜಾಡಕುಲತಿಲಕನಾಗಿ ಅತ್ಯಂತ್ಯ ಪೂಜ್ಯವಕ್ತಿಯಾಗಿದ್ದನು.

ಜೇಡರ ದಾಸಿಮಯ್ಯನ ವಚನಗಳಲ್ಲಿನ ಮೌಲ್ಯಗಳನ್ನು ಆಧ್ಯಾತ್ಮಿಕ, ಸಾಹಿತ್ಯಕ ಎಂದು ಎರಡು ದೃಷ್ಟಿಗಳಿಂದ ವಿಚಾರ ಮಾಡಬಹುದು.

ಚಿಕ್ಕ ಚಿಕ್ಕ ವಾಕ್ಯಗಳಿಂದ ಕೂಡಿದ ಈತನ ವಚನಗಳು ಪರಿಪಕ್ವವಾದ ಅಂತರಂಗದ ಅನುಭಾವವನ್ನೂ, ಅತೀಂದ್ರಿಯ ಅನುಭವವನ್ನೂ ಬಹು ಸಮರ್ಥವಾಗಿ ಪಡಿಮೂಡಿಸುತ್ತದೆ. ಪರಮಾತ್ಮಸ್ವರೂಪ, ಸೃಷ್ಟಿಕ್ರಮ, ಜೀವಾತ್ಮ ಪರಮಾತ್ಮರಿಗಿರುವ ಸಮ್ಯಕ್ ಸಂಬಂಧ, ಮೋಕ್ಷ ಸ್ವರೂಪ, ಗುರುವಿನ ಲಕ್ಷಣ, ಭಕ್ತಾಭಿಮಾನ, ಸಮರ್ಪಣಭಾವ, ಧರ್ಮನೀತಿ ಮೊದಲಾದ ವಿಚಾರಗಳು ಆತನ ವಚನಗಳಲ್ಲಿವೆ.

ಪರಮಾತ್ಮನ ಇರವನ್ನುಕುರಿತು -

**"ಮಣಿಗಣಸೂತ್ರದಂತೆ ತ್ರಿಜಗಯ ನೀನಿಪ್ಪೆಯಯ್ಯಾ**
**ಎಣಿಸುವೊಡೆತನು ಭಿನ್ನ ಆತ್ಮನೊಬ್ಬನೆ**
**ಅಣುರೇಣುಮಧ್ಯದಲ್ಲಿ ಗುಣಭರಿತ**
**ನೀನೆಂದು ಮಣಿವುತಿಪ್ಪೆನೈ ರಾಮನಾಥ** - ಎಂದು ನಿರೂಪಿಸುವನು.

**ಪರಮಾತ್ಮನ ಅಪಾರ ಶಕ್ತಿಯನ್ನು ಕುರಿತು.**
**ಶರಧಿಯ ಮೇಲೆ ಧರೆಯ ಕರಗದಂತಿರಿಸಿದೆ**
**ಅಂಬರಕ್ಕೆ ಗಡಿಗೆ ಬೋದಿಗೆ ಇಲ್ಲದಂತಿರಿಸಿದೆ**
**ಎಲೆಮೃಡನೆ ನೀನಲ್ಲದೆ ಉಳಿದೈವಂಗಳಿಗೆ**
**ಅಹುದೆ ರಾಮನಾಥ"** ಎಂದು ಹೇಳಿ, ಸೃಷ್ಟಿಯ ಕ್ರಮವನ್ನು

ಕುರಿತು ಹೇಳುವಾಗ -

**"ಇಂತೆಂದ ಭೂಮಿಯ ಇಂತೆಂದಗಗನವ**
**ಇಂತೆಂದ ಸಪ್ತಸಾಗರವ,**
**ಇಂತೀಲೋಕದೊಳಗೆ ತಿಂತಿಣಿಯಾಗಿಪ್ಪ**
**ಅಚಿಂತನನವರಾರು ಬಲ್ಲರೈ ರಾಮನಾಥ"** ಎಂದೂ

**"ಧರಣಿಯ ಪಸರಿಸಿ ಉರಗನನಡಿಯಿಟ್ಟು**
**ಶರಧಿಯೇಳಕ್ಕೆ ಎರೆದ ನೊರ್ಕುಡಿತೆ ಉದಕವ**
**ಹರಿಯ ಜಸುರರಿಗೆ ಪರಿಪರಿಯ ಲೋಕವಕೊಟ್ಟು**
**ಅರಿಯದಂತಿರ್ದ ಕಾಣಾರಾಮನಾಥ"**

ಎಂದು ಹಾಡಿದ್ದಾನೆ.

ಆ ಪರಮಾತ್ಮ ಸೃಷ್ಟಿಗೆ ಹೇಗೆ ಕಾರಣಕರ್ತನೋ ಸ್ಥಿತಿಗೂ ಕಾರಣನೆಂಬಂಶ -

**'ಇಳೆ ನಿಮ್ಮದಾನ, ಬೆಳೆ ನಿಮ್ಮದಾನ,**
**ಸುಳಿದು ಬೀಸುವ ಗಾಳಿ ನಿಮ್ಮದಾನ**
**ಕಾಯ ನಿಮ್ಮ ದಾನ, ಜೀವ ನಿಮ್ಮದಾನ**
**ಎತ್ತು ನಿಮ್ಮದಾನ ಬಿತ್ತು ನಿಮ್ಮದಾನ'**
**ಸುತ್ತಿ ಹರಿವ ಸಾಗರ ನಿಮ್ಮದಾನ**
**ಎಂಬ ಮಾತುಗಳಲ್ಲಿ ವ್ಯಕ್ತಪಡಿಸುತ್ತಾನೆ.**

ಈ ಜೀವನ ಅತ್ಯಂತ ದುರ್ಬಲವಾದುದು ಎಂಬುದನ್ನು -

**"ಒಡಲುಗೊಂಡವ ಹಸಿವ ಒಡಲುಗೊಂಡವ ಹುಸಿವ**
**ಒಡಲುಗೊಂಡವನೆಂದು ನೀನೆನ್ನ ಜಡಿದೊಮ್ಮೆನುಡಿಯದಿರಾ**
**ನೀನೆನ್ನಂತೆ ಒಮ್ಮೆ ಒಡಲುಗೊಂಡು ನೋಡಾ"**

- ಎಂಬ ವಚನದಲ್ಲಿ ಹೇಳುತ್ತಾ ಈ ಜೀವನ ಸುಲಭವಲ್ಲ. ಒಡಲುಗೊಂಡವನು ಹಸಿವನ್ನು ಹಿಂಗಿಸಲು ಶ್ರಮಪಡಬೇಕು. ಕೆಲವೊಮ್ಮೆ ಹುಸಿಯಾಡಲೂ ಬೇಕು. ಒಡಲುಗೊಂಡವನೆಂದು ನರನನ್ನು ಹೀಯಾಳಿಸುವುದು ಸೂಕ್ತವಲ್ಲ. ನೀನೂ ಒಮ್ಮೆ ಒಡಲುಗೊಂಡು ನೋಡು ಎಂದು ಪರಮಾತ್ಮನಿಗೇ ಸವಾಲೆಸೆಯುತ್ತಾನೆ.

ಭಕ್ತಿ-ಭಕ್ತನ ಸ್ವರೂಪವನ್ನು ಕುರಿತು ಬಹಳವಾಗಿ ವಿಚಾರ ಮಾಡಿದ್ದಾನೆ. ಭಕ್ತಿಗೆ ಮೂಲ ನಂಬಿಕೆ ಎಂಬುದನ್ನು -

**ನೆರೆನಂಬಿಕರೆದರೆ ನರಿ ಕುದುರೆಯಾಗಿ ಹರಿಯವೆ?**
**ಜಗವೆಲ್ಲಾ ಅರಿಯಲು ತೊರೆಯೊಳಗೆ ಬಿದ್ದ ಲಿಂಗ**
**ಕರೆದರೆ ಬಂತು ಕರಸ್ಥಲಕ್ಕೆ"**
**"ನಂಬಿದ ಚೆನ್ನನ ಅಂಬಲಿಯನುಂಡ**
**ಕೆಂಬಾವಿ ಭೋಗಯ್ಯ ಹಿಂದಾಡಿಹೋದ**

ಕುಂಭದ ಗತಿಗೆ ಕುಕಿಲರೆದು ಕುಣಿದ" ಎಂದು ಸಾಕ್ಷಿ ನುಡಿದು

- ನಂಬದವರ ಹಂಬಲನೊಲ್ಲ ಪರಮಾತ್ಮ ಎಂಬ ದೃಢನಿಲವನ್ನು ವ್ಯಕ್ತ ಮಾಡುತ್ತಾನೆ. ಭಕ್ತಿಯನ್ನು ಶುದ್ಧಮನದಿಂದ ಆಚರಿಸಬೇಕು. ಅವರಿವರಿಗಾಗಿ, ಊರಿಗಾಗಿ ಭಕ್ತಿಯ ಮಾಡ ಬಾರದು, ಅದು 'ದೂರದ ಹೊಲದಂತೆ'. ಯಾವ ಲಾಭವೂ ಇಲ್ಲ. ಡಂಬಾಚಾರ, ಹೀನಮನದಿಂದ ಮಾಡುವ ಭಕ್ತಿ **"ಹಂದಿ ಶ್ರೀಗಂಧವ ಹೂಸಿದರೇನು ಅದು ಗಂಧರಾಜನಾಗಬಲ್ಲುದೆ"** ನವಿಲು ನಲಿಯಿತ್ತೆಂದು ಕಾಕೋಳಿಪುಚ್ಛವತರಿಕೊಂಡಂತೆ ಕರ್ಮಿಗಳ ಭಕ್ತಿ ಹೊರ ವೇಷದ ವಿಭೂತಿ ರುದ್ರಾಕ್ಷಿಯ ಪೂಸಿದರೇನು. ವೇಷವನೂ ವೇಶಿಯನೂ ಸರಿಯೆಂಬೆ. ಎಂಬ





ಮಾತುಗಳಲ್ಲಿ ಖಂಡಿಸಿದ್ದಾನೆ. ಆಸೆ ಆಮಿಷಗಳಿಗೆ ಒಳಗಾಗಿ ಮಾಡುವ ಭಕ್ತಿ ಬೆಕ್ಕು ಸನ್ಯಾಸತೆಗೆದು ಕೊಂಡತೆ ಎಂದು "ಬರಿ ಸಟೆಗನ ಭಕ್ತಿವಂತ'ದೊಳಗಣಬೆಕ್ಕು ಇಲಿಯ ಕಂಡುಪುಟನೆಗೆದಂತೆ" ಎಂಬಲ್ಲಿ ಸೂಚಿಸಿದ್ದಾನೆ.

ತಾತ್ವಿಕ ವಿಚಾರವನ್ನು ಸಮರ್ಥವಾಗಿ ನಿರೂಪಿಸುವ ಈತನ ವಚನಗಳಲ್ಲಿ ಕಾವ್ಯ ಸೌಂದರ್ಯವೂ ಅಷ್ಟೇ ಸಮರ್ಥವಾಗಿ ಮೂಡಿಬಂದಿದೆ. ಕನ್ನಡ ಸಾಹಿತ್ಯದಲ್ಲಿ ಜನಭಾಷೆಗೆ ಕಾವ್ಯ ಭಾಷೆಯ ಪಟ್ಟಕಟ್ಟಿ ಸಾಮಾನ್ಯ ಜನತೆಯೂ ಕಾವ್ಯಗಂಗೆಯಲ್ಲಿ ಮುಳುಗಿ ಪುನೀತರಾಗುವಂತೆ ಮಾಡಿದ ಕೀರ್ತಿ ಜೇಡರ ದಾಸಿಮಯ್ಯನದು. ಸಾಂಪ್ರದಾಯಿಕವಾಗಿ ಕಾವ್ಯರಚನೆ ಮಾಡಿದ ಕವಿ ಶ್ರೇಷ್ಠರು ಭಾಷೆಗೆ ಉತ್ತಮಸ್ಥಾನ ತಂದುಕೊಟ್ಟರು. ಜನಭಾಷೆ ಗ್ರಾಂಥಿಕ ಭಾಷೆಯಾಗಿ ಪರಿವರ್ತನೆಗೊಳ್ಳುತ್ತಿದ್ದ ಪರ್ವಕಾಲದಲ್ಲಿ ದಾಸಿಮಯ್ಯ ಜನನುಡಿಯಲ್ಲಿ ವಿಷಯ ಪ್ರತಿ ಪಾದನೆ ಮಾಡಿ ಕನ್ನಡ ಭಾಷೆಗೆ ಉತ್ತಮೋತ್ತಮ ಸ್ಥಾನಗಳಿಸಿಕೊಟ್ಟನು. ಈತ ಹೇಳುವ ಮಾತುಗಳು ರಸವತ್ತಾದ ಕಾವ್ಯವಾಣಿಗಳಾಗಿವೆ. ಉಪಮೆ, ದೃಷ್ಟಾಂತ, ಗಾದೆ ಮಾತುಗಳು ಆಡುನುಡಿಯ ಪದಸಮೂಹಗಳ ಬಳಕೆಯಿಂದ ಅವನ ಅಭಿವ್ಯಕ್ತಿಯಲ್ಲಿ ವಿಶೇಷ ಕಾಂತಿ ಕಂಡುಬರುತ್ತದೆ. ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ವಿಪುಲವಾದ ಲೌಕಿಕ ಜಮಕಿನ ಚಿತ್ರವನ್ನು ಕೊಡುವಲ್ಲಿ ದಾಸಿಮಯ್ಯ ಸಮರ್ಥ. ಈತನ ವಚನಗಳ ಭಾಷೆ ಜೇನಿನಲ್ಲಿ ಅದ್ದಿತೆಗದ ರಸಬಾಳೆ ಹಣ್ಣಿನಂತೆ ಬಲುರುಚಿ ಬಹುಹಿತ.

ದಾಸಿಮಯ್ಯ ಬಳಸಿರುವ ಉಪಮೆಗಳು ಹೆಚ್ಚು ಜನ ಜೀವನದಿಂದ ಆರಿಸಿಕೊಂಡಂತಹುವುಗಳು. ಉದಾಹರಣೆಗೆ:

**"ಉರಿವ ಕೆಂಡದ ಮೇಲೆ ತೃಣನತಂದಿರಿಸಿದಡೆ ಆತಣವನು ಆಕೆಂಡನುಂಗುವಂತೆ"**
**"ಘಟದೊಳಗೆ ತೋರುವ ಸೂರ್ಯನಂತೆ"**
**"ಮಠದೊಳಗಣ ಬೆಕ್ಕು ಇಲಿಯ ಕಂಡು ಪುಟನೆಗೆದಂತೆ"**
**"ಹೊಳ್ಳಕುಟ್ಟಿ ಕೈ ಹೋಟೆಯಾದಂತೆ"**
**"ಪಾಶಕ್ಕೆ ಸಿಕ್ಕಿದ ಪಶುವಿನಂತೆ"**
**ಹೂವಿನೊಳಗಣಕಂಪ ಹೊರಸೂಸಿ ಸುಳಿವ ಅನಿಲನಂತೆ.**
**ಈ ಉಪಮೆಗಳ ಸೊಗಸೇ ಸೊಗಸು.**

ಈತ ಬಳಸಿರುವ ದೃಷ್ಟಾಂತಗಳು ಜನತೆಯ ದಿನನಿತ್ಯ ಬಳಕೆಯಲ್ಲಿನ ಭಾಷೆಯಿಂದ ಬಂದಿವೆ.

**"ಕಡೆಗೀಲಿಲ್ಲದ ಬಂಡಿ ಹೊಡೆಗೆಡುಯದೆ ಮಾಣ್ಬುದೆ**
**ಕಡೆಗೀಲುಬಂಡಿಗಾಧಾರ ಇಡಿದರ್ಪಯೇರಿದ್ದ**
**ಒಡಲೆಂಬ ಬಂಡಿಗೆ ಮೃಡಭಕ್ತರ ನುಡಿಗಡಣವೇ**
**ಕಡೆಗೀಲು ಕಾಣಾರಾಮನಾಥ"**
**ಜ್ವರ ವಿಡಿದ ಬಾಯಿಗೆ ನೊರೆವಾಲು ಉರಿಸುವುದೆ?**
**"ಕೆನೆಯಿಲ್ಲದ ಮೊಸರ ಕಡೆದರೆ ಅಲ್ಲಿ ಹನಿತುಪ್ಪವಿಲ್ಲ"**
**ಹಂದೇಡಿಗೆ ಹಿಡಿಯಬಹುದೆ ಹೇಳಿಗೆಯೊಳಗಣ ಹಾವ**
**ಸುನಕನ ಬಾಯ ಎಲುವ ಪ್ರತಿಸುನಕ ತಿಂದಂತೆ"**

ಎಂಬಲ್ಲಿನ ದೃಷ್ಟಾಂತಗಳು ಆಡು ಮಾತಿನ ಸೊಗಡಿನಿಂದ ಪರಿಪ್ಲುತವಾಗಿವೆ.

**"ನವಿಲು ಕುಣಿಯಿತ್ತೆಂದರೆ ಕಾಕೋಳಿ ಪುಚ್ಛವ ತರಕೊಂಡತೆ"**
**"ಕತ್ತೆ ಬಲ್ಲುದೆ ಕಸ್ತುರಿಯ ವಾಸನೆಯ"**
**"ಬತ್ತಿದ ಕೆರೆಯಲ್ಲಿ ತಾವರೆಯ ಬಿತ್ತಿದಂತೆ"**
**"ಹುಣಸೆ ಹೂವೆಲ್ಲ ಕಾಯಾಗಬಲ್ಲುದೆ"** - ಇತ್ಯಾದಿ ಗಾದೆಗಳನ್ನು ಸಂದರ್ಭಕ್ಕೆ ಹೊಂದುವಂತೆ ಬಳಸಿದ್ದಾನೆ.

ಒಂದು ಮಾತನ್ನು ಹಲವು ಅರ್ಥಗಳಲ್ಲಿ ಶ್ಲೇಷಾರ್ಥದಲ್ಲಿ ಸಮರ್ಥವಾಗಿ ಸಮುಚಿತವಾಗಿ ಬಳಸುವಲ್ಲಿ ದಾಸಿಮಯ್ಯ ಸಮರ್ಥ. **"ಮಣಿವೊಡೆ ಶಿವಭಕ್ತಮಣಿಯ ಕಟ್ಟಲೇಬೇಕು"** ಎಂಬಲ್ಲಿ **'ಮಣಿ'** ಶಬ್ದವನ್ನು ತಲೆಬಾಗು, ರುದ್ರಾಕ್ಷಿ, ರತ್ನ, ಸೇವೆ ಎಂಬೆಲ್ಲ ಅರ್ಥಗಳಲ್ಲಿ ಬಳಸಿದ್ದಾನೆ. **'ಬಯಲಬಣ್ಣವ ಮಾಡಿ'** ಎಂಬಲ್ಲಿ ಬಯಲು, ಶೂನ್ಯ, ಪರಿಪೂರ್ಣ ಎಂಬ ಅರ್ಥಗಳಲ್ಲಿಯೂ, ಬಣ್ಣ ಶಬ್ದ ಸಾಮಾನ್ಯವಾದ (ವರ್ಣ) 'ಬಣ್ಣ' ಎಂಬರ್ಥವಲ್ಲದ ಸೃಷ್ಟಿ ಎಂಬ ವಿಶೇಷ ಅರ್ಥದಲ್ಲಿ ಬಳಸಿದ್ದಾನೆ.

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ **"ಇವನ ವಚನಗಳಲ್ಲಿ ಜೀವಕಳೆಯಿದೆ. ಈತ ಹೇಳಬೇಕಾದ ಮಾತುಗಳನ್ನು ಮನಮುಟ್ಟುವ ಹಾಗೆ ಹೇಳುತ್ತಾನೆ. ಆ ವಚನಗಳಲ್ಲಿ ತತ್ವ ಶುಷ್ಕನಾದ ನಿರೂಪಣೆಯಿಲ್ಲ. ಉದಾತ್ತ ಭಾವಗಳನ್ನು ಹುಬ ಚಮತ್ಕಾರವಾಗಿ ಸುಲಭವಾದ ಮಾತುಗಳಲ್ಲಿ ಓದಿದೊಡನೆಯೇ ಮನಸ್ಸಿಗೆ ಹಿಡಿಯುವ ಹಾಗೆ, ಒಂದೊಂದು ದೊಡ್ಡ ಚಿತ್ರವೇ ಕಣ್ಣೆದುರಿಗೆ ನಿಂತ ಹಾಗೆ ಬರೆಯುವುದರಲ್ಲಿ ಕುಶಲನು"** ಎಂಬ ಮಾತುಗಳು ಆತನ ವಚನ ಸೃಷ್ಟಿಯನ್ನು ಸೂಕ್ತವಾಗಿ ಪ್ರತಿಪಾದಿಸುತ್ತವೆ.

ಸಾಮಾಜಿಕವಾಗಿಯೂ ದಾಸಿಮಯ್ಯ ಗಮನಹರಿಸಿರುವುದುಂಟು. ಆತನ ಕಾಲದಲ್ಲಿಯೂ, ಸ್ತ್ರೀ-ಪುರುಷ, ಇದ್ದವ-ಇಲ್ಲದವ; ಅತ್ಯಂತ-ಉತ್ತಮ ವರ್ಣದವ ಎಂಬ ಧರ್ಮಘಾತಕ ಪ್ರವೃತ್ತಿಗಳು ಪ್ರಚಲಿತವಿದ್ದುವು. ಇದನ್ನು ಮನ ಗಂಡ ದಾಸಮಯ್ಯ ಖಂಡಿಸಿದ್ದಾನೆ. ಜಾತಿ ಪದ್ಧತಿಯನ್ನು ವಿಡಂಬಿಸಿದ್ದಾನೆ. ಸ್ತ್ರೀ ಸಮಾನತ್ವವನ್ನು ಎತ್ತಿ ಹಿಡಿದಿದ್ದಾನೆ.

ಮದ್ಯಪಾನ, ಮಾಂಸಭಕ್ಷಣ, ಪರಸ್ತ್ರೀಸಂಗ, ವೈಶ್ಯೆಯರ ಸಂಗವನ್ನು ತೊರೆಯಬೇಕು. ದೇವರಿಗೆ ಬಾಗಿ ನಡೆಯಬೇಕು. ಹಾಗಿಲ್ಲದಿದ್ದರೆ ಆತ ಶೂಲದ ತಲೆ" ಎಂದು ಎಚ್ಚರಿಸುವನು.

ಹೀಗೆ ಅಧಿಕಾರವಾಣಿಯಿಂದ, ಮೃದುವಾಗಿ, ಕೆಲವೊಮ್ಮೆ ಕಟುವಾಗಿ ಹೇಳಿ ಸಮಾಜವನ್ನು ತಿದ್ದಿ ತಿಳಿಸಿದ್ದಾನೆ.

ದಾಸಿಮಯ್ಯ ಉಪನಿಷತ್ತುಗಳು, ಭಗವದ್ಗೀತೆಗಳಿಂದ ಪ್ರಭಾವಿತನಾಗಿ ಆಯಾ ಜೀವನ ಮೌಲ್ಯಗಳನ್ನು ಕನ್ನಡದಲ್ಲಿ ತಂದಿದ್ದಾನೆ. ಅಂತೆಯೆ ಈತನಿಂದ ಮುಂದೆ ಬಂದ ವಚನಕಾರರೂ, ಶರಣರೂ ಆದ, ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು, ಅಂಬಿಗರ ಚೌಡಯ್ಯ, ಸರ್ವಜ್ಞ ಮೊದಲಾದವರು ಈತನಿಂದ ಪ್ರಭಾವಿತರಾಗಿದ್ದಾರೆ.

ಹನ್ನೆರಡನೆ ಶತಮಾನಕ್ಕೆ ಪೂರ್ವದಲ್ಲಿ ಕನ್ನಡ ನಾಡಿನಲ್ಲಿ ಒಬ್ಬ ಸಮರ್ಥವಿಚಾರವಾದಿ,ಶರಣ, ವಚನಕಾರನಾಗಿ ದಾಸಿಮಯ್ಯ ಅತ್ಯಂತ ಶ್ರೇಷ್ಠನಾಗಿದ್ದಾನೆ.

●

**ಇದು ನಿಮಗೆ ತಿಳಿದಿರಲಿ**

## ಬಾಳೆ ಹಣ್ಣು

ಹಣ್ಣುಗಳಲ್ಲಿ ಅತ್ಯಂತ ಶ್ರೇಷ್ಠವಾದದ್ದು ಬಾಳೆಹಣ್ಣು. ಮಲಬದ್ಧತೆಯಿಂದ ನರಳುವ ರೋಗಿಗಳಿಗೆ ಈ ಹಣ್ಣು ಉತ್ತಮ ಆಹಾರ. ಭಾರತೀಯ ಹಬ್ಬ-ಹರಿದಿನಗಳಲ್ಲಿ, ಇತರೇ ಪೂಜಾ ಸಮಾರಂಭಗಳಲ್ಲಿ, ಮಂಗಳ ಕಾರ್ಯಗಳಲ್ಲಿ ಬಾಳೆಹಣ್ಣನ್ನು ಶುಭಸಂಕೇತವಾಗಿ ಬಳಸುವರು. ಉತ್ಸವ ಸಮಾರಂಭಗಳಲ್ಲಿ ಭಾಗವಹಿಸುವ ಮಂದಿ ದೇವರ ಪ್ರಸಾದವೆಂಬ ನೆಪದಿಂದಲಾದರೂ ಈ ಫಲವನ್ನು ಸೇವಿಸಿ ಆರೋಗ್ಯಭಾಗ್ಯ ಪಡೆಯಲೆಂಬುದು ನಮ್ಮ ಹಿರಿಯರ ಉದ್ದೇಶವಾಗಿರಬೇಕು. ನಮ್ಮಲ್ಲಿ ಹಣ ಕೊಟ್ಟು ಹಣ್ಣುಕೊಂಡು ತಿನ್ನುವ ಜನ ಕಡಿಮೆ. ಈ ದೌರ್ಬಲ್ಯವನ್ನರಿತ ಹಿರಿಯರು ಉಣ್ಣದ ದೇವರಿಗೆ ಅರ್ಪಿಸುವ ನೈವೇದ್ಯದಲ್ಲಿ ಬಾಳೆಹಣ್ಣಿಗೆ ಅಗ್ರಸ್ಥಾನ ಕೊಟ್ಟಿರಬೇಕು.

## ಅಭಿನಂದನೆ

### ಡಾ. ದೇ. ಜವರೇಗೌಡರಿಗೆ ಎರಡು ಪ್ರತಿಷ್ಠಿತ ಪ್ರಶಸ್ತಿಗಳು



ನಾಡಿನ ಹಿರಿಯ ವಿದ್ವಾಂಸ, ಸೃಜನಶೀಲ ಲೇಖಕ ಡಾ. ದೇ. ಜವರೇಗೌಡರಿಗೆ ೧೯೯೮ರ ಕರ್ನಾಟಕ ಸರ್ಕಾರದ **'ಪಂಪ ಪ್ರಶಸ್ತಿ'** ಹಾಗೂ ಕನ್ನಡ ವಿಶ್ವವಿದ್ಯಾನಿಲಯದ **'ನಾಡೋಜ'** ಪ್ರಶಸ್ತಿ ಅವರ ವಿದ್ವತ್ತಿಗೆ, ನಾಡನುಡಿಗೆ ಸಲ್ಲಿಸಿದ ಸೇವೆಗೆ ಸಂದ ಎರಡು ಪ್ರತಿಷ್ಠಿತ ಪ್ರಶಸ್ತಿಗಳು.

ಕನ್ನಡ ಉಪನ್ಯಾಸಕರಾಗಿ ವೃತ್ತಿಯನ್ನು ಆರಂಭಿಸಿದ ಪ್ರೊ. ದೇ. ಜವರೇಗೌಡರು, ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರಾಗಿ, ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿ ಸೇವೆ ಸಲ್ಲಿಸಿ ಆಯಾ ಹುದ್ದೆಗಳಿಗೆ ಘನತೆ, ಗೌರವವನ್ನು ತಂದುಕೊಟ್ಟರು.

ಕರ್ನಾಟಕ ವಿಶ್ವವಿದ್ಯಾನಿಲಯದ ಗೌರವ ಡಾಕ್ಟರೇಟ್, ಸೋವಿಯತ್ ಲ್ಯಾಂಡ್ ಪ್ರಶಸ್ತಿ, ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ೧೯೭೦ರಲ್ಲಿ ಬೆಂಗಳೂರಿನಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯೂ ಸೇರಿದಂತೆ ಹಲವು ಗೌರವ ಪ್ರಶಸ್ತಿಗಳು ಸಂದಿವೆ.

ಜನಪದ ಗೀತಾಂಜಲಿ, ಗದ್ಯಶೈಲಿ, ಜನಪದ ಅಧ್ಯಯನ, ಶ್ರೀ ರಾಮಾಯಣ ದರ್ಶನ, ವಚನ ಚಂದ್ರಿಕೆ ಮೊದಲಾದ ೫೦ಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು ನೀಡಿ ಸಾಹಿತ್ಯ ಲೋಕವನ್ನು ಶ್ರೀಮಂತಗೊಳಿಸಿದ್ದಾರೆ.

ಡಾ. ಜವರೇಗೌಡರಿಗೆ **'ಸಿದ್ಧಗಂಗಾ'** ಗೌರವ ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತದೆ.







# ಶಿವಯೋಗಿ ಶ್ರೀ ಸಿದ್ಧರಾಮೇಶ್ವರ

- ಸಿ. ಸೋಮಶೇಖರ
ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ

ಶಿವಶರಣ ಶ್ರೇಷ್ಠರಲ್ಲೊಬ್ಬರಾದ ಶ್ರೀ ಸಿದ್ಧರಾಮೇಶ್ವರರು ಕರ್ಮಯೋಗದಿಂದ ಶಿವಯೋಗಕ್ಕೆ ಏರಿದ ಮಹಾ ವೈರಾಗ್ಯಮೂರ್ತಿ. ಹಠಯೋಗದ ಸಿದ್ಧಿ ರಾಜಮಾರ್ಗದ ಸಾಧನೆ, ಕರ್ಮಯೋಗದ ಪ್ರಭಾವಗಳಿಂದ ಮಹಾ ಭೌತಿಕ ಶಕ್ತಿಯನ್ನು ಹೊಂದಿದ್ದ ಸಿದ್ಧರಾಮೇಶ್ವರರು, ಉರಿನೇತ್ರವನ್ನು ಗಳಿಸಿಕೊಂಡಿದ್ದ ಮಹಾ ಪವಾಡ ಪುರುಷರು. ಭವಸಾಗರದಿಂದ ಭವ್ಯ ಸಾಗರದೆಡೆಗೆ ಹೇಗೆ ಸಾಗಬಹುದು ಎಂಬುದನ್ನು ತಮ್ಮ ಬದುಕಿನ ದೃಷ್ಟಾಂತದೊಂದಿಗೆ ಜಗತ್ತಿಗೆ ತೋರಿಸಿದ ಮಹಾ ಸಾಧಕರಾದ ಶ್ರೀ ಸಿದ್ಧರಾಮೇಶ್ವರರು ಕೊನೆಗೆ ಶಿವಯೋಗಕ್ಕೆ ಮಣಿಯ ಬೇಕಾಯಿತು. ಶಿವಯೋಗದ ಮುಂದೆ ಎಲ್ಲ ಯೋಗಗಳೂ ತೀರಾ ಅಲ್ಪ ಎಂಬ ಸತ್ಯ ಸಾಕ್ಷಾತ್ಕಾರವನ್ನು ಸಿದ್ಧರಾಮೇಶ್ವರರಿಗೆ ಮಾಡಿಕೊಟ್ಟ, ಹಿರಿಮೆ ಜ್ಞಾನನಿಧಿ ಅಲ್ಲಮಪ್ರಭುಗಳದು. ಇಷ್ಟಲಿಂಗವನ್ನು ಕರುಣಿಸಿದ ಗರಿಮೆ ಷಟ್‌ಸ್ಥಳ ಚಕ್ರವರ್ತಿ ಶ್ರೀ ಚೆನ್ನಬಸವಣ್ಣನವರದು.

ಕರ್ಮಯೋಗಿಯಾಗಿದ್ದ ಸಿದ್ಧರಾಮೇಶ್ವರರಿಗೆ ಶಿವಾಲಯಗಳನ್ನು ಕೆರೆಬಾವಿಗಳನ್ನು ಕಟ್ಟಿಸುವ ಹಂಬಲ. ಅತ್ತ ಕಡೆಯೇ ಅವರ ದೃಷ್ಟಿ. ಆ ದಿಸೆಯಲ್ಲಿಯೇ ಅವರ ಎಲ್ಲ ಪ್ರಯತ್ನ. ಇದನ್ನು ಕಂಡ ಪ್ರಭುವಿಗೆ ಸಿದ್ಧರಾಮೇಶ್ವರರ ಬಗ್ಗೆ ಒಂದು ರೀತಿಯಲ್ಲಿ ದುಃಖ ಮತ್ತೊಂದು ರೀತಿಯಲ್ಲಿ ಸಹಾನುಭೂತಿ. ಶಿವಾಲಯಗಳನ್ನು ಕಟ್ಟಿಸುತ್ತಿದ್ದ ಸಿದ್ಧರಾಮೇಶ್ವರರನ್ನು ಕಂಡು ಅಲ್ಲಮ ಪ್ರಭುಗಳು ಹೀಗೆ ಹಾಸ್ಯ ಮಾಡುತ್ತಾರೆ :

***"ಕಲ್ಲಮನೆಯ ಮಾಡಿ, ಕಲ್ಲುದೇವರ ಮಾಡಿ, ಆ ಕಲ್ಲಮೇಲೆ ಕಡೆದರೆ ದೇವರೆತ್ತ ಹೋದರೋ? ಲಿಂಗ ಪ್ರತಿಷ್ಠೆಯ ಮಾಡಿದವರಿಗೆ ನಾಯಕ ನರಕ ಗುಹೇಶ್ವರಾ"***

***"ದೇಹವೇ ದೇಗುಲವಾಗಿರಲು ಬೇರೆ ಮತ್ತೆ ದೇವಾಲಯವೇಕೆ?"*** ಎಂದು ಮಾರ್ಮಿಕವಾಗಿ ಪ್ರಶ್ನಿಸುವ ಪ್ರಭುಗಳ ದೃಷ್ಟಿಯಲ್ಲಿ ಸ್ವರ್ಗ ಬೇರೆ ಶಿವನ ಸಾನ್ನಿಧ್ಯ ಬೇರೆ, ಅನ್ನದಾನ, ಕೆರೆ ನಿರ್ಮಾಣ, ಅರವಟ್ಟಿಗೆಗಳ ವ್ಯವಸ್ಥೆ ಇವುಗಳು ಸ್ವರ್ಗಕ್ಕೆ ಹೋಗಲು ಸಹಾಯಕವಾಗಬಹುದಾದರೂ ಶಿವನ ಸಾನ್ನಿಧ್ಯ, ಸಾಮೀಪ್ಯ ಇವುಗಳಿಂದ ದೊರಕಲಾರದು. ಅಲ್ಲದೆ ಶಿವನರಿತ ನಿಜ ಶರಣರಿಗೆ ಯಾವ ಪ್ರತಿಫಲಾಪೇಕ್ಷೆಯೂ ಇರುವುದಿಲ್ಲ, ಇರಲೂ ಬಾರದು.

ಭೌತಿಕ ಕೆರೆನಿರ್ಮಾಣದಲ್ಲಿ ತೊಡಗಿದ್ದ ಕರ್ಮಯೋಗಿ ಸಿದ್ಧರಾಮರ ಪ್ರಯತ್ನವನ್ನು ಕಂಡು ಮರುಗಿದ ಅಲ್ಲಮಪ್ರಭುಗಳವರು ತಾವೊಂದು ಶಾಶ್ವತವಾದ ಆಧ್ಯಾತ್ಮಿಕ ಕೆರೆಯನ್ನು ನಿರ್ಮಿಸಿದುದರ ಬಗ್ಗೆ ಈ ರೀತಿ ನುಡಿಯುತ್ತಾರೆ :

**"ತನುವೆಂಬ ಏರಿಗೆ ಮನವೆಂಬ ಕಟ್ಟೆ**
**ಆಚಾರವೆಂಬ ಸೋಪಾನ**
**ಪರಮಾನಂದವೆಂಬ ಜಲವ ತುಂಬಿ,**
**ಕೆರೆಯ ಕಟ್ಟಬಲ್ಲವನಾದನೂ ಕಾಣೆ**
**ನಾನು ಕಟ್ಟಿದ ಕೆರೆ ಸ್ಥಿರವಾಯಿತ್ತು**
**ಗುಹೇಶ್ವರಾ-ನಿಮ್ಮಾಣೆ"**

ಎಂದು ಸಿದ್ಧರಾಮೇಶ್ವರರಿಗೆ ಪ್ರಭುದೇವವು ಯೋಗ ಶಿವಯೋಗಗಳ ಸೂಕ್ಷ್ಮ ಪರಿಚಯ ಮಾಡಿಸಿಕೊಡುತ್ತಾರೆ.

**"ಕೆರದೇಗುಲಂಗಳೆಲ್ಲವು ಹಿಂದಣ ಅಡಿವೆಜ್ಜೆಗೆ ರೂಪು**
**ಕರ್ಮಕಾಂಡ ಯೋಗಂಗಳೆಲ್ಲವೂ**
**ಭವದ ತೆಕ್ಕೆಗೆ ಒಳಗು ಹಿಂದಣ ಮುಂದಣ ನಂದನಳಿದು**
**ಗುಹೇಶ್ವರಲಿಂಗದಲಿ ಸಲೆ ಸಂದಿರಬೇಕು ಸಿದ್ಧರಾಮಯ್ಯ"**

ಎಂದು ಅಲ್ಲಮಪ್ರಭುಗಳು ಸಿದ್ಧರಾಮೇಶ್ವರರನ್ನು ಕುರಿತು ವ್ಯಂಗ್ಯವಾಗಿ ನುಡಿದಾಗ ಸಿದ್ಧರಾಮೇಶ್ವರರು ನೀಡುವ ಉತ್ತರ ಅಷ್ಟೇ ಮಾರ್ಮಿಕವಾಗಿದೆ ;

**"ಕೃಷಿಯ ಮಾಡಿ ಉಣ್ಣದೆ ಹಸಿವು ಹರೆವ ಪರಿ ಇನ್ನೆಂತು?**
**....ಪರಿ ಇನ್ನೆಂತು?**
**ನೀ ಮನ ಮುಕ್ತವಾದ ಕಾರಣ, ನಿನ್ನೊಡನೆ ಎನ್ನ**
**ಮನ ಮುಕ್ತ ನೋಡಯ್ಯ"**

ಎನ್ನುವ ಸಿದ್ಧರಾಮೇಶ್ವರರ ಮಾತಿಗೆ ಪ್ರಭುದೇವರು ಹೀಗೆ ನುಡಿಯುತ್ತಾರೆ :

"ಮನ ಉಂಟೆ ಮರುಳೆ ಶಿವಯೋಗಿಗೆ? ಮತ್ತೊಮ್ಮೆ ಮನ ಮಗ್ನ ಉಂಟೆ ಶಿವಯೋಗಿಗೆ?"

ಪ್ರಭುದೇವರಿಂದ ನಡೆದ ಸತ್ವಪರೀಕ್ಷೆಯಲ್ಲಿ ಸತ್ವನಿಷ್ಠರಾಗಿ ಹೊರಬಂದ ಸಿದ್ಧರಾಮರ ನಿಷ್ಠೆ, ಕಾಯಕ ತತ್ವದ ಮೇಲಿನ ಅಚಲವಾದ ನಂಬಿಕೆಯನ್ನು ಕಂಡು ಆನಂದಗೊಂಡ ಪ್ರಭುದೇವರು ಸಿದ್ಧರಾಮೇಶ್ವರರನ್ನು ಪರಮಯೋಗಿ, ನಿರಂಜನಯೋಗಿ, ಶುದ್ಧ ಸಾತ್ವಿಕಯೋಗಿ, ಮಹಾಜ್ಞಾನೈಕ್ಯ ಚೈತನ್ಯಯೋಗಿ ಮೊದಲಾಗಿ ಪ್ರಶಂಶಿಸುತ್ತಾರೆ.

ಪ್ರಭುದೇವರ ಮತ್ತು ಸಿದ್ಧರಾಮೇಶ್ವರ ನಡುವಣ ವಾದ-ಸಂವಾದ, ಸಂಭಾಷಣೆಗಳನ್ನು ನೋಡಿದಾಗ "ಪ್ರಭುದೇವರ ವಚನಗಳು ಪ್ಲೇಟೋನ ಸಂಭಾಷಣೆಗೆ ಸಮಾನ" ಎಂಬ ಸಾಹಿತ್ಯ ವಿಮರ್ಶಕರ ಮಾತು ನೆನಪಿಗೆ ಬರುತ್ತದೆ. ಒಂದು ಕಡೆ ಸಿದ್ಧರಾಮೇಶ್ವರರ ಯೋಗಜೀವನದ ಬಗ್ಗೆ ಗೌರವ ಮೂಡಿದರೆ ಮತ್ತೊಂದು ಕಡೆ ಪ್ರಭುದೇವರ ಜ್ಞಾನಸಂದೇಶವನ್ನು ಕೇಳಿ ತನ್ಮಯರಾಗುತ್ತೇವೆ.

ಶಿವಯೋಗಿ ಸಿದ್ಧರಾಮೇಶ್ವರರು ವಚನಗಳನ್ನು ರಚಿಸುವುದರ ಮೂಲಕ ಉತ್ತಮ ವಚನಕಾರರ ಗುಂಪಲ್ಲಿ ಸೇರಿದ್ದಾರೆ. ವಚನಕಾರ ವಚನಗಳ ಶೈಲಿಯ ಬಗ್ಗೆ ವಿಶ್ಲೇಷಿಸುತ್ತ ಒಬ್ಬ ಸಾಹಿತ್ಯ ವಿಮರ್ಶಕರು ವಿವಿಧ ವಚನಕಾರರ ವಚನಗಳ ಶೈಲಿಯನ್ನು ಹೀಗೆ ಪಟ್ಟಿಮಾಡಿದ್ದಾರೆ :

ಬಸವೇಶ್ವರ ವಚನಗಳಲ್ಲಿ ಮೃದು ಸ್ವಭಾವವನ್ನು; ಅಲ್ಲಮಪ್ರಭುಗಳ ವಚನಗಳಲ್ಲಿ ಅಧಿಕಾರ ವಾಣಿಯನ್ನು, ಚೆನ್ನಬಸವಣ್ಣನವರ ವಚನಗಳಲ್ಲಿ ಉಪದೇಶಾತ್ಮಕ ಭಾವನೆಯನ್ನು, ಅಕ್ಕಮಹಾದೇವಿಯವರ ವಚನಗಳಲ್ಲಿ ಕಾವ್ಯರಮಣೀಯತೆಯನ್ನು, ಅಂಬಿಗರ ಚೌಡಯ್ಯನವರ ವಚನಗಳಲ್ಲಿ ಒರಟು, ಮೊನಚು ಮತ್ತು ಕಾಠಿಣ್ಯತೆಯನ್ನು, ಸಿದ್ಧರಾಮೇಶ್ವರರ ವಚನಗಳಲ್ಲಿ ಜಿಜ್ಞಾಸಾಸ್ವರೂಪವನ್ನು ಕಾಣುತ್ತೇವೆ.

**ಭಕ್ತನಾದರೆ ಬಸವಣ್ಣನಂತಾಗಬೇಕು**
**ಜಂಗಮನಾದರೆ ಪ್ರಭುವಿನಂತಾಗಬೇಕು**
**ಭೋಗಿಯಾದರೆ ನಮ್ಮ ಗುರುಚೆನ್ನಬಸವನಂತಾಗಬೇಕು**
**ಯೋಗಿಯಾದರೆ ನನ್ನಂತಾಗಬೇಕು**

ಬಸವಣ್ಣನವರು, ಪ್ರಭುದೇವರು, ಚೆನ್ನಬಸವಣ್ಣನವರು ಈ ಶರಣ ಶ್ರೇಷ್ಠರಲ್ಲಿ ಭಕ್ತರನ್ನು, ಜಂಗಮರನ್ನು, ಗುರುವನ್ನು ಕಂಡು ಸಿದ್ಧರಾಮೇಶ್ವರರು ಸ್ವತಃ ತಾವೇ ಯೋಗಿ ಎಂದು ಮೇಲಿನ ವಚನದಲ್ಲಿ ನಿರೂಪಿಸಿದ್ದಾರೆ.

ಕರ್ಮಯೋಗ, ಅನುಷ್ಠಾನ, ನಂತರ ಕರ್ಮಯೋಗ - ಶಿವಯೋಗಗಳ ಸಮನ್ವಯಕ್ಕೆ ಪ್ರಯತ್ನ, ಅನಂತರ ಶಿವಯೋಗಕ್ಕೆ ಸಂಪೂರ್ಣವಾಗಿ ಶರಣಾಗಿ ಶಿವಯೋಗಾಮೃತ ಸೇವಿ ಸಂತುಷ್ಟಯೋಗಿ ಎಂಬ ಬಿರುದನ್ನು ಪ್ರಭುದೇವರಿಂದ ಪಡೆದ ವೈರಾಗ್ಯನಿಧಿ ಸಿದ್ಧರಾಮೇಶ್ವರರ ಜನ್ಮದಿನೋತ್ಸವ ಮಕರ ಸಂಕ್ರಾಂತಿಯಂದು. ಅವರ ಶಿವಯೋಗದ ಮೌಲ್ಯಗಳ ಜಿಜ್ಞಾಸೆ ಚಿಂತನ ಮಂತನ ಮತ್ತು ಅನುಷ್ಠಾನವೇ ಸಿದ್ಧರಾಮೇಶ್ವರರನ್ನು ಸ್ಮರಿಸಲು ನಾವು ಮಾಡಬಹುದಾದ ಪವಿತ್ರ ಪ್ರಯತ್ನ. ಆ ಪ್ರಯತ್ನಕ್ಕೆ ಕೈ ಹಾಕುವುದೇ ಒಂದು ಯೋಗ. ಅದರಿಂದ ಲಭ್ಯವಾಗುವುದೇ ಶಿವಯೋಗ.



ಕಾಯವೆಂಬ ಕೆರೆಗೆ ತನುವೆಂಬ ಏರಿ, ಮನವೆಂಬ ಕಟ್ಟೆಯ ಕಟ್ಟಿ.
ದೃಢವೆಂಬ ತೂಬನು ಇಕ್ಕಬೇಕಯ್ಯಾ.
ಆನಂದವೆಂಬ ಜಲವ ತುಂಬಿ, ಸ್ವಾನುಭಾವವೆಂಬ
ಸೋಪಾನವ ಹೂಡಬೇಕಯ್ಯ.
ಆ ಕೆರೆಯ ಏರಿಯ ಮೇಲೆ ಆಚಾರವೆಂಬ ವೃಕ್ಷವ ಬೆಳೆಯಿಸಿ.
ಅರುಹೆಂಬ ಹೂವನು ಅದ್ವೈತವೆಂಬ ಹಸ್ತದಿಂದ ಕೊಯಿದು
ಅನುಪಮ ಲಿಂಗಕ್ಕೆ ಪೂಜಿಸಬಲ್ಲರೆ, ಲಿಂಗಾರ್ಚಕರೆಂಬೆ
ಈ ಬೇಧವನರಿಯದೆ, ಹುಸಿಯನೆ ಪೂಜಿಸಿ
ಗಸಣೆಗೊಳಗಾದ ಪಿಸುಣರಿಗಳನು ಲಿಂಗಪೂಜಕರೆಂದು
ಎಂತೆಂಬೆನಯ್ಯಾ ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ?

**– ತೋಂಟದ ಸಿದ್ಧಲಿಂಗ**







# ಮಾಲಿನ್ಯದ ಮಾತು

**– ಡಾ. ಸಾ. ಶಿ. ಮರುಳಯ್ಯ**
ಮಾಜಿ ಅಧ್ಯಕ್ಷರು,
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

*'ದೂರ ಕೆಡಿಸಿಕೊಂಡರೂ ನೆರೆ ಕೆಡಿಸಿಕೊಳ್ಳಬೇಡ'* ಎಂಬುದೊಂದು ಗಾದೆ ಮಾತು. ಅದರರ್ಥ ಅಕ್ಕಪಕ್ಕದವರೊಡನೆ ದ್ವೇಷ ಕಟ್ಟಿಕೊಳ್ಳಬೇಡ, ಪ್ರೀತಿ, ವಿಶ್ವಾಸ, ಸಹಾಯ, ಸಹಾನುಭೂತಿಗಳಿಂದ ಕೂಡಿದ್ದು ಸೌಹಾರ್ದಯುತ ಬದುಕು ಮಾಡು ಎಂದು. ನೆರೆ ಹೊರೆಯ ಸಹಬಾಳ್ವೆಯ ಈ ಅಂಶವನ್ನೇ ವಿಶಾಲಾರ್ಥದಲ್ಲಿ ಗ್ರಹಿಸಿದಾಗ ಅದು ಪರಿಸರದ ವ್ಯಾಪಕಾರ್ಥವನ್ನು ಪಡೆಯುತ್ತದೆ. ಅಂದರೆ ಪರಿಸರದ ಶುದ್ಧತೆ ನಮ್ಮ ಜೀವನದ ಪ್ರಗತಿ ಹಾಗೂ ಪಾರಿಶುದ್ಧ್ಯಕ್ಕೆ ಹೇತುವಾಗುತ್ತದೆ. ಹಾಗಲ್ಲದೆ ಪರಿಸರ ಕೆಟ್ಟರೆ ನಮ್ಮ ಬದುಕೂ ವಿನಾಶದ ಹಾದಿ ಹಿಡಿಯುತ್ತದೆ. ಇಂದು ನಮ್ಮ ಪರಿಸರದಲ್ಲಿ ಶುದ್ಧತೆಗೆ ಬದಲು ಮಲಿನತೆ ತಾಂಡವವಾಡುತ್ತಿದೆ. ನಿಸರ್ಗದತ್ತವಾದ ಶುದ್ಧ ಗಾಳಿ ನೀರೂ ದೊರಕುತ್ತಿಲ್ಲ. ಎಲ್ಲೆಡೆಯೂ ಜಲಮಾಲಿನ್ಯ, ವಾಯು ಮಾಲಿನ್ಯ, ಜೊತೆಗೆ ಶಬ್ದ ಮಾಲಿನ್ಯ! ನಾವಾರೂ ಇದನ್ನು ಗಂಭೀರವಾಗಿ ತೆಗೆದುಕೊಳ್ಳದಿರುವುದು ನಿಜಕ್ಕೂ ಒಂದು ವಿಪರ್ಯಾಸ! ಅಲ್ಲಮ ಪ್ರಭು ಒಂದು ವಚನದಲ್ಲಿ ಹೇಳಿದ್ದಾರೆ.

**ಧರೆಗೆ ನಿದ್ರೆಯು ಇಲ್ಲ, ಉದಕಕ್ಕೆ ಕನಸಿಲ್ಲ**
**ಅಗ್ನಿ ಕಳವಳಕೆ ಒಳಗಾಗದೆಂತೋ**
**ಸುಳಿವ ಪವನನು ತಾನು ತಾಮಸಕ್ಕೊಳಗಾಗ**
**ಬಯಲಿಂಗೆ ಭ್ರಮೆಯುಂಟೆ ಗುಹೇಶ್ವರಾ!**

ಅಂದರೆ, ಪಂಚಭೂತಗಳಲ್ಲಿ ಭೂಮಿಯಾಗಲಿ, ನೀರಾಗಲಿ, ತೇಜಸ್ಸಾಗಲಿ, ಗಾಳಿಯಾಗಲಿ ಇಲ್ಲವೇ ಬಯಲು ಅಥವಾ ಆಕಾಶವಾಗಲಿ ಎಂದಿಗೂ ಯಾರಿಂದಲೂ ಅವು ವಂಚಿತವಾಗುವುದಿಲ್ಲ. ಆತ್ಮವಂಚನೆಯಂತೂ ಅವಕ್ಕೆ ತಿಳಿದೇ ಇಲ್ಲ. ಆದರೆ ಪ್ರಭುದೇವರ ಕಾಲಕ್ಕೂ ನಮ್ಮ ಕಾಲಕ್ಕೂ ಎಂಟುನೂರು ವರ್ಷಗಳ ಅಂತರ ಇದೆ. ಈ ನಡುವೆ ಎಷ್ಟೋ ಬದಲಾವಣೆಗಳು ಆಗಿವೆ. ಅದರಲ್ಲೂ ಒಂದೆರಡು ಶತಮಾನಗಳಲ್ಲಿ ಭೂಮಂಡಲ ವಾಯುಮಂಡಲ ಜಲವಲಯಗಳು ಸಾಕಷ್ಟು ಪ್ರಮಾಣದಲ್ಲಿ ಮಲಿನಗೊಂಡಿವೆ. ಸದಾ ಸೌಂದರ್ಯವನ್ನೆ ಮುಡಿದು ಮೆರೆಯುವ ಭೂಮಿತಾಯಿ ಅನಾಥೆಯಾಗಿದ್ದಾಳೆ. **'ರತ್ನಗರ್ಭಾ ವಸುಂಧರಾ'** ಇಂದು **'ಮಲಿನಗರ್ಭಾ ವಸುಂಧರೆ'** ಆಗಿದ್ದಾಳೆ. ಎಲ್ಲೆಲ್ಲೂ ಮಾಲಿನ್ಯ, ಪ್ರಗತಿಯ ಹೆಸರಿನಲ್ಲಿ ಪರಿಸರದ ನಾಶ! ಭೂಮಿ ದಿನೇ ದಿನೇ ಸವೆಯುತ್ತಿದೆ. ಸಾರಹೀನವಾಗುತ್ತಿದೆ. ಆಸಿಡ್ ರೈನ್‌ನಿಂದಾಗಿ ಮರಗಿಡಗಳ ನಾಶ, ಅರಣ್ಯ ನಾಶ. ಭೂಸಾರ ಭಗ್ನತೆ ಮತ್ತು ಮಣ್ಣಿನ ಸವಕಳಿ. ಕೈಗಾರಿಕೋದ್ಯಮದ ಪರಿಣಾಮವಾಗಿ ಭೂಮಿಯ ಎದೆ ಮೆಟ್ಟಿನಿಂತ ಗಿರಣಿಗಳು ಎಲ್ಲ ಬಗೆಯ ಮಾಲಿನ್ಯಕ್ಕೆ ಕಾರಣವಾಗಿದೆ. ಗಿರಣಿಗಳ ಸ್ಥಾಪನೆ ಅಭಿವೃದ್ಧಿಗಳಿಂದಾಗಿ ಅರಣ್ಯನಾಶ, ಅದು ವಿಸರ್ಜಿಸಿದ ಕೊಳಚೆ ಕೊಚ್ಚೆಯಿಂದಾಗಿ ನದೀ ನೀರು ಮಲಿನ. ಪರಮಪಾವನೆ ಎನಿಸಿದ ಗಂಗೆ ಅಸಹ್ಯದ ವಸ್ತುವಾಗಿದ್ದಾಳೆ ಇಂದು. **'ಗಂಗಾಪಾನ ತುಂಗಾಸ್ನಾನ'** ಎಂಬ ಜನನುಡಿ ಇಂದು ಸುಳ್ಳಾಗಿದೆ. ತುಂಗೆಯಲ್ಲಿ ಸ್ನಾನ ಮಾಡಿದರೆ ಕೆಟ್ಟ ಸಾಂಕ್ರಾಮಿಕ ರೋಗಕ್ಕೆ ಎಲ್ಲಿ ಬಲಿಯಾಗುತ್ತೇವೋ ಎಂಬ ಭಯ. ಗಂಗೆಯಂತೂ ಇಂದು ತೀರ್ಥವಾಗಿಲ್ಲ, ಕೊಚ್ಚೆಯಾಗಿದ್ದಾಳೆ. ಸಾಯುವಾಗ ಮುಕ್ತಿ ಸಿಗಲೆಂದು ಗಂಗಾಜಲ ಬಿಡುತ್ತಿದ್ದರು. ಇಂದು ಆರೋಗ್ಯವಾಗಿ ಬದುಕಿದ್ದವರು ಕುಡಿದರೆ ಸಾಕು ಬೇಗ ಮುಕ್ತಿ ಪಡೆದುಬಿಡುತ್ತಾರೆ. ಇಂತಹ ದುಃಸ್ಥಿತಿ ನೆಲಜಲಗಳಿಗಾದರೆ ವಾಯುಮಂಡಲದ ಗಾಳಿ ಶುದ್ಧೀಕರಣಗೊಳ್ಳುವ ಸಾಮರ್ಥ್ಯ ಕಳೆದುಕೊಂಡಿದೆ. ಗಿರಣಿಗಳು, ಸ್ಫೋಟಗೊಳ್ಳುವ ಬಾಂಬುಗಳ ವಿನಾಶಕಾರಿ ಕ್ರಿಯೆಗಳಿಂದ ವಾಯುಮಂಡಲ ಸಂಪೂರ್ಣವಾಗಿ ಕಲುಷಿತ ವಾಗಿದೆ. ಗಿರಣಿಗಳಿಂದ ಮೇಲೆದ್ದ ಇಂಗಾಲದ ವಿಷಾನಿಲ ಕ್ಲೋರೋಫ್ಲೂರಾ ಕಾರ್ಬನ್, ಭೂಮಿಯ ರಕ್ಷಾಕವಚವಾಗಿರುವ ಓಜೋನ್ ವಲಯವನ್ನೆ ಛಿದ್ರ ಛಿದ್ರಗೊಳಿಸುತ್ತಿದೆ. ಇದು ಹೀಗೆಯೇ ಮುಂದುವರಿದರೆ ಕೇವಲ ಕೆಲವೇ ವರ್ಷಗಳಲ್ಲಿ ಓಜೋನ್ ವಲಯ ಸಂಪೂರ್ಣ ನಾಶವಾಗಿ, ಭೂಮಿಗೆ ರಕ್ಷೆಯೇ ಇಲ್ಲವಾಗಿ, ಸೂರ್ಯನ ಪ್ರಚಂಡ ಕಿರಣಗಳ ಪ್ರಖರ ಪ್ರಹಾರಕ್ಕೆ ಗುರಿಯಾಗಿ ಭೂಮಿ ಸುಟ್ಟು ಬೂದಿಯಾಗುವ ಸಂಭವ ಇದೆ. ಈಗಾಗಲೇ ಅದಕ್ಕೆ ಜ್ವರ ಬಂದಿರುವುದು ನಮ್ಮೆಲ್ಲರ ಅನುಭವಕ್ಕೆ ಬಂದಿರುವ ಅಂಶ. ಸೂರ್ಯನ ತಾಪ ನಮ್ಮನ್ನು ತತ್ತರಿಸುವಂತೆ ಮಾಡಿದೆ. ಧಗ ಧಗೆ ಧಗೆ! ಮಳೆ ಇಲ್ಲ, ತಂಪಿಲ್ಲ. ಇರುವ ಅಷ್ಟೂ ಇಷ್ಟು ಓಜೋನ್ ಮಂಡಲ ಹರಿದರೆ ಭೂಮಿಯ ವಿನಾಶ ಕಟ್ಟಿಟ್ಟ ಬುತ್ತಿ!

# 'ಶ್ರೀ ಸಿದ್ಧಗಂಗಾ ಕ್ಷೇತ್ರ ಶಿಕ್ಷಣದ ಜೊತೆಗೆ ಸಂಸ್ಕಾರ, ಮಾನವೀಯತೆಯ ಅರಿವು ಮೂಡಿಸುತ್ತಿದೆ'

**- ಪ್ರಧಾನಿ ಶ್ರೀ ಅಟಲ್ ಬಿಹಾರಿ ವಾಜಪೇಯಿ**

"ವಿದ್ಯೆಯ ಜೊತೆ ಸಂಸ್ಕಾರ, ಮಾನವೀಯತೆಯ ಅರಿವು ಮೂಡಿಸುವಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರ ಸಂಪೂರ್ಣ ಯಶಸ್ವಿಯಾಗಿದೆ" ಎಂದು ಪ್ರಧಾನಿ ಶ್ರೀ ಅಟಲ್ ಬಿಹಾರಿ ವಾಜಪೇಯಿ ಅವರು ಶ್ಲಾಘಿಸಿದರು.

ಅವರು ಜನವರಿ ಐದರಂದು ನಗರದ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ನಡೆದ ಶ್ರೀ ಸಿದ್ಧಲಿಂಗೇಶ್ವರ ವೇದ-ಸಂಸ್ಕೃತ ಮಹಾವಿದ್ಯಾಲಯದಲಗನೇ ಸಂಸ್ಕೃತೋತ್ಸವ ಹಾಗೂ ಸಿದ್ಧಗಂಗಾ ತಾಂತ್ರಿಕ ಮಹಾ ವಿದ್ಯಾಲಯದ 'ವಾಸ್ತುಶಿಲ್ಪ' ಭವನ ಉದ್ಘಾಟನ ನೆರವೇರಿಸಿ ಮಾತನಾಡುತ್ತಿದ್ದರು.

"ಸರ್ಕಾರಗಳು ನೀಡುವ ಶಿಕ್ಷಣದಿಂದ ವಿದ್ಯಾರ್ಥಿಗಳಿಗೆ ವಿದ್ಯೆ ಮಾತ್ರ ದೊರೆಯುತ್ತದೆ ಆದರೆ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ

ಪರಮ ಪೂಜ್ಯ ಶ್ರೀ ಶ್ರೀಗಳವರ ದಿವ್ಯ ಸಾನಿಧ್ಯದಲ್ಲಿ ಪ್ರಧಾನಿ ಶ್ರೀ ಅಟಲ್ ಬಿಹಾರಿ ವಾಜಪೇಯಿ ಅವರು ಶ್ರೀ ಕ್ಷೇತ್ರದಲ್ಲಿ ನಡೆದ ಲಗನೆಯ ಸಂಸ್ಕೃತೋತ್ಸವ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡುತ್ತಿರುವುದು. ಈ ಸಂದರ್ಭದಲ್ಲಿ ಶ್ರೀ ಕ್ಷೇತ್ರದ ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗ ಸ್ವಾಮಿಗಳು ಉಪಸ್ಥಿತರಿದ್ದರು.





ಸಂಸ್ಕೃತ ಕಾಲೇಜು

ವಿದ್ಯೆ ಕಲಿತು ಹೊರಬರುವ ವಿದ್ಯಾರ್ಥಿ ಸುಸಂಸ್ಕೃತನಾಗಿ, ಮಾನವನಾಗಿ ಸಮಾಜಕ್ಕೆ ಉಪಯುಕ್ತವಾಗುತ್ತಾನೆ" ಎಂದರು.

"ಗ್ರಾಮೀಣ ವಿದ್ಯಾರ್ಥಿಗಳಿಗೆ ಅವಶ್ಯಕವಾದ ಶಿಕ್ಷಣವನ್ನು ನೀಡಲು ಇಂದು ಸರ್ಕಾರದಿಂದ ಸಾಧ್ಯವಾಗುತ್ತಿಲ್ಲ. ಈ ನಿಟ್ಟಿನಲ್ಲಿ ಸರ್ಕಾರದ ಸಾಧನೆ ಸೀಮಿತವಾಗಿದೆ ಎಂದು ವಿಷಾಧಿಸಿದ ಅವರು ಶ್ರೀ ಸಿದ್ಧಗಂಗಾ ಕ್ಷೇತ್ರದ ಸ್ವಾಮಿಗಳು ಸರ್ಕಾರ ಸಾಧಿಸದಿದ್ದನ್ನು ಸಾಧಿಸಿ ತೋರಿಸಿದ್ದಾರೆ" ಎಂದರು.

"ಇಂದು ಭಾರತವನ್ನು ಹಸಿವು, ಭಯ ಹಾಗೂ ಭ್ರಷ್ಟಾಚಾರದ ಅನಿಶ್ಚಿತತ ತುಂಬಿ ಕಾಡುತ್ತಿದ್ದು, ಇವುಗಳಿಂದ ಮುಕ್ತವಾದ ಭಾರತವನ್ನು ನಿರ್ಮಿಸುವ ಕನಸು ಹೊಂದಿರುವುದಾಗಿ ತಿಳಿಸಿದ ಪ್ರಧಾನಿಯವರು ಈ ಅನಿಶ್ಚಿತತೆಗೆ ಸರ್ಕಾರಿ ವ್ಯವಸ್ಥೆಯೇ ಕಾರಣವಾಗಿದ್ದು, ಇಂಥ ವಾತಾವರಣದಿಂದ ಮುಕ್ತವಾದ ಸಮಾಜವನ್ನು ನಿರ್ಮಿಸಲು ಶ್ರಮಿಸುತ್ತಿರುವ ಸಿದ್ಧಗಂಗಾ ಕ್ಷೇತ್ರದ ಶ್ರೀಗಳ ಕಾರ್ಯ ಮಾರ್ಗದರ್ಶಕವಾಗಿದೆ" ಎಂದರು.

ಸಿದ್ಧಗಂಗಾ ಮಠವು ತನ್ನ ತ್ರಿವಿಧ ದಾಸೋಹದಿಂದ ಸಾಮಾಜಿಕ, ಶೈಕ್ಷಣಿಕ ಚಟುವಟಿಕೆಯ ಜೊತೆಗೆ ಧಾರ್ಮಿಕ ತಳಹದಿಯನ್ನು ಹೊಂದಿರುವ ಅಪರೂಪದ ಸಂಸ್ಥೆಯಾಗಿದೆ ಎಂದು ವಾಜಪೇಯಿ ಶ್ಲಾಘಿಸಿದರು. ಸಮಾಜದ ಸಾಮಾನ್ಯ ಜನರಿಗೆ ಸಂಸ್ಕೃತ ಅಲಭ್ಯವಾಗಿರುವ ಇಂದಿನ ದಿನದಲ್ಲಿ ಸಿದ್ಧಗಂಗಾ ಕ್ಷೇತ್ರದಲ್ಲಿ ವಿದ್ಯಾರ್ಥಿಗಳಿಗೆ ಸಂಸ್ಕೃತ ಕಲಿಸುತ್ತಿದ್ದು, ಹಿರಿಯರು ಕಂಡ ಕನಸು ಇಲ್ಲಿ ಸಾಕಾರವಾಗಿದೆ ಎಂದವರು ಪ್ರಶಂಶಿಸಿದರು.

ಪ್ರಾಚೀನ ಜ್ಞಾನದೊಂದಿಗೆ ಆಧುನಿಕ ವಿಜ್ಞಾನದ ಅವಶ್ಯಕತೆಯಿದು. ಅದಕ್ಕೂ ಶ್ರೀ ಕ್ಷೇತ್ರದಲ್ಲಿ ಅವಕಾಶ ಕಲ್ಪಿಸಲಾಗಿದೆ ಎಂದ ಪ್ರಧಾನಿಯವರು ವಿಜ್ಞಾನ ಅಭಿವೃದ್ಧಿಯ ದ್ಯೋತಕವಾಗಿದೆ, ವಿವೇಕವಂತರ ಕೈಗೆ ವಿಜ್ಞಾನ ದೊರೆತಾಗ ದೇಶೋದ್ಧಾರಕ ಯೋಜನೆಗಳು ರೂಪಿತವಾಗುತ್ತದೆ. ದುಷ್ಟರ ಕೈಗೆ ದೊರೆತರೆ ಸಮಾಜಘಾತುಕತನವಾಗುವ ಕಾರ್ಯತಂತ್ರಗಳು ಸಿದ್ಧವಾಗುತ್ತವೆ" ಎಂದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ರಾಜ್ಯಪಾಲ ಶ್ರೀ ಖುರ್ಷಿದ್ ಆಲಂಖಾನ್ ಅವರು ಭಾರತದಲ್ಲಿ ಸಾವಿರಾರು ಶಾಲಾ ಕಾಲೇಜುಗಳಿದ್ದರೂ ಶೈಕ್ಷಣಿಕ ಪ್ರಗತಿ ಸಾಧಿಸದಿರುವುದಕ್ಕೆ ವಿಷಾಧಿಸಿದರು.

ದೇಶದ ಪ್ರಗತಿಯಲ್ಲಿ ಶಿಕ್ಷಣ ಬಹು ಮುಖ್ಯ ಪಾತ್ರ ವಹಿಸುತ್ತಿದ್ದು, ಶಿಕ್ಷಣವಿಲ್ಲದೆ ಯಾವುದೇ ಪ್ರಗತಿ ಸಾಧ್ಯವಿಲ್ಲ ಎಂದ ಅವರು ದೇಶದಲ್ಲಿ ಸಾಕ್ಷರತೆಯ ಬಗ್ಗೆ ವಿವಿಧ ಯೋಜನೆ ರೂಪಿಸಿದರೂ ಪ್ರಗತಿ ಸಾಧ್ಯವಾಗಿಲ್ಲ ಎಂದರು.

ದೇಶದಲ್ಲಿ ಅನಕ್ಷರಸ್ಥರ ಸಂಖ್ಯೆ ಅಧಿಕವಾಗುತ್ತಿದ್ದು, ವಿಶ್ವದ ಪ್ರತಿ ಮೂವರು ಅನಕ್ಷರಸ್ಥರಲ್ಲಿ ಒಬ್ಬ ಭಾರತೀಯನಿರುತ್ತಾನೆ. ನಮ್ಮಲ್ಲಿ ೨೫೦ ವಿಶ್ವವಿದ್ಯಾಲಯ ೯೦೦೦ ಸಾವಿರಕ್ಕೂ ಹೆಚ್ಚು ಕಾಲೇಜುಗಳಿದ್ದರೂ ಎಲ್ಲರಿಗೂ ಶಿಕ್ಷಣ ನೀಡಲಾಗದಿರುವುದು ವಿಷಾಧನೀಯವೆಂದು ಅವರು ಅಂಥ ಪರಿಸ್ಥಿತಿಯಲ್ಲೂ ನಗರದ ಸಿದ್ಧಗಂಗಾ ಕ್ಷೇತ್ರವೂ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡಿ ದೇಶದ ಅಭಿವೃದ್ಧಿಯಲ್ಲಿ ಗಣನೀಯ ಪಾತ್ರ ವಹಿಸಿದೆ ಎಂದು ಶ್ಲಾಘಿಸಿದರು.

ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಮುಖ್ಯಮಂತ್ರಿ ಶ್ರೀ ಜೆ.ಹೆಚ್. ಪಟೇಲ ಅವರು ಮಾತನಾಡಿ "ಪ್ರತಿಯೊಬ್ಬ ಪ್ರಜೆಗೂ ಶಿಕ್ಷಣ ನೀಡುವುದು ಸರ್ಕಾರಗಳ ಕರ್ತವ್ಯವಾಗಿದ್ದರೂ, ಅದರಲ್ಲಿ ಸರ್ಕಾರಗಳು ವಿಫಲವಾಗಿವೆ" ಎಂದರು.

ನಾನು, ರಾಜ್ಯ ಬಿಜೆಪಿ ಅಧ್ಯಕ್ಷ ಶ್ರೀ ಎಡೆಯೂರಪ್ಪ ಹಾಗೂ ಸಂಸದರಾದ ಶ್ರೀ ಎಸ್. ಮಲ್ಲಿಕಾರ್ಜುನಯ್ಯ ಈ ಮಠಕ್ಕೆ ಸೇರಿದವರು ಎಂದ ಅವರು ಶ್ರೀ ಕ್ಷೇತ್ರದ ಕಾರ್ಯಕ್ರಮದಲ್ಲಿ ಭಾಗವಹಿಸಿದ ಪ್ರಧಾನಿಯವರನ್ನು ಅವರು ಅಭಿನಂದಿಸಿದರಲ್ಲದ ಗ್ರಾಮೀಣ ಪ್ರದೇಶದ ಮಕ್ಕಳಿಗೆ ವಿದ್ಯಾಭ್ಯಾಸ ಮಾಡುತ್ತಿರುವಲ್ಲಿ ಶ್ರಮಿಸುತ್ತಿರುವ ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಕೇಂದ್ರ ಸರ್ಕಾರದಿಂದ ಸಾಧ್ಯವಾದ ಸಹಾಯವನ್ನು ನೀಡಬೇಕೆಂದು ಮನವಿ ಮಾಡಿದರು. ಶ್ರೀಗಳ ಆಶೀರ್ವಾದ ನನ್ನ ಮೇಲೆ ಹಾಗೂ ಪ್ರಧಾನಿ ವಾಜಪೇಯಿಯವರ ಮೇಲೆ ಇರಲಿ ಎಂಬ ಆಶಯ ವ್ಯಕ್ತಪಡಿಸಿದರು.

ಸಮಾರಂಭದ ದಿವ್ಯ ಸಾನಿಧ್ಯ ವಹಿಸಿದ್ಧ ಪರಮ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ ಪ್ರಧಾನಮಂತ್ರಿ ಶ್ರೀ ಅಟಲ ಬಿಹಾರಿ ವಾಜಪೇಯಿಯವರು ಶ್ರೀ ಕ್ಷೇತ್ರಕ್ಕೆ ಆಗಮಿಸಿ ತಮ್ಮೊಂದಿಗೆ ಕೆಲವು ನಿಮಿಷಗಳ ಕಾಲ ಕಳೆದುದಕ್ಕಾಗಿ ಸಂತೋಷವನ್ನು ವ್ಯಕ್ತಪಡಿಸಿದರು.

ಭಾರತ ಸೌಶೀಲ್ಯ ರಾಷ್ಟ್ರಗಳಲ್ಲಿ ಮಹತ್ವದ ಸ್ಥಾನವನ್ನು ಪಡೆದಿದೆ. ಜಗತ್ತಿನ ಕಲ್ಯಾಣಕ್ಕೆ ಮತ್ತು ಮಾನವೀಯತೆಯ ಅಭಿವೃಧ್ಧಿಗೆ ಭಾರತದ ಕಾಣಿಕೆ ಅತ್ಯಪೂರ್ಣವಾದುದಾಗಿದೆ. ರಾಜಕೀಯ, ಸಾಮಾಜಿಕ, ವೈಜ್ಞಾನಿಕ, ಕಲೆ, ಸಾಹಿತ್ಯ ವಾಣಿಜ್ಯ ಮತ್ತು ಕೈಗಾರಿಕಾ ಕ್ಷೇತ್ರಗಳಲ್ಲಿ ಐದು ಸಾವಿರ ವರ್ಷಗಳಿಗೂ ಹೆಚ್ಚು ಕಾಲದಿಂದ ತನ್ನ ಸೃಜನಶೀಲತೆಯ ಶ್ರೇಷ್ಠಮಟ್ಟವನ್ನು ನಮ್ಮ ಉಜ್ವಲ ಇತಿಹಾಸ ದಾಖಲು ಮಾಡಿದೆ. ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನಗಳ ಅರುಣೋದಯಕ್ಕೂ ಮೊದಲು ಅಂತಹ ಬೌದ್ಧಿಕ ಸಿದ್ಧಿಕೌಶಲಗಳನ್ನು ಪ್ರದರ್ಶಿಸಿದ ಸಮಾನಾಂತರ ಚಾರಿತ್ರಿಕ ದಾಖಲೆ ಇನ್ನೊಂದಿಲ್ಲ. ನಮ್ಮ ಪೂರ್ವಿಕರು ದೈನಂದಿನ ಅಗತ್ಯಗಳಿಗೆ ಸಾಕಾಗುವ ಭೌತವಿಜ್ಞಾನಗಳ ಮಹತ್ವಧ ಬಗ್ಗ ಜೀವಂತ ತಿಳಿವಳಿಕೆಯುಳ್ಳವರಾಗಿದ್ದರು. ಎಷ್ಟಾದರೂ, ಅವರು ಆದಿ ಭೌತಿಕ ಶಕ್ತಿಯೊಂದಿಗೆ ಸುಮಧುರ ಬಾಂಧವ್ಯ ಹೊಂದದ ಭೌತಿಕತೆ ತನ್ನ ಸಂಪೂರ್ಣಾರ್ಥವನ್ನು ಪಡೆಯಲಾರದು ಎಂದು ಕಂಡುಕೊಂಡಿದ್ದರು. ಆದುದರಿಂದ ಭಾರತೀಯ ಆಧ್ಯಾತ್ಮಿಕತೆ ಯುಗಯುಗಗಳಿಂದ ಭೌತವಿಜ್ಞಾನಾದಿಗಳಲ್ಲಿ ಆಳವಾಗಿ ಬೇರೂರಿತು. ಭಾರತೀಯ ಪ್ರಾಚೀನ ಸಂಸ್ಕೃತಿಯನ್ನು ಕುರಿತು ಶ್ರೀ ಅರವಿಂದರು "ರಕ್ತಗತವಾಗಿ ನೆಲೆಯಾಗಿರುವ ಆಧ್ಯಾತ್ಮಿಕತೆ. ಅಕ್ಷಯಾತ್ಮಕವಾದ ಅತಿ ಮಹತ್ವಪೂರ್ಣ ಸೃಜನಶೀಲತೆ ಮತ್ತು ಜೀವನದ ರಭಸ, ಅವರನ್ನು ಶಕ್ತಿಶೀಲ ಮತ್ತು ಆಳವಾದ ಅಂತರ್‌ದೃಷ್ಟಿಯುಳ್ಳ, ಸದಸದ್ವಿವೇಕಯುತ ಬುದ್ಧಿಯುಳ್ಳ, ಚಿಂತನಶೀಲ ನೈತಿಕ ಮತ್ತು ಸೌಂದರ್ಯಾತ್ಮಕ ಜ್ಞಾನಿಗಳನ್ನಾಗಿ



ಪ್ರಧಾನ ಮಂತ್ರಿ ಶ್ರೀ ಅಟಲ್ ಬಿಹಾರಿ ವಾಜಪೇಯಿ ಅವರು ಶ್ರೀ ಶ್ರೀಗಳವರ ಕಾರ್ಯಾಲಯದಲ್ಲಿ ಸಮಾಲೋಚನೆ ನಡೆಸುತ್ತಿರುವುದು








ಪರಮ ಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ

ಉನ್ನತ ಕ್ರಿಯಾಶೀಲರನ್ನಾಗಿ ಮಾಡುವುದರ ಮೂಲಕ, ಭಾರತೀಯ ಪ್ರಾಚೀನ ಸಂಸ್ಕೃತಿ ಸಾಮರಸ್ಯವನ್ನು ಸಾಧಿಸಿತು" ಎಂದು ಹೇಳುತ್ತಾರೆ.

ಇದು ವಿಜ್ಞಾನಯುಗ. ವಿಜ್ಞಾನ ಮಾನವನ ಕೈಯಲ್ಲಿ ಅಧಿಕ ಶಕ್ತಿಯನ್ನು ನಿಕ್ಷೇಪಿಸುತ್ತ ಮತ್ತು ಆ ಶಕ್ತಿಯನ್ನು ಅನ್ವಯಿಸುವುದರ ಮುಖೇನ ಜಗತ್ತಿನಲ್ಲಿ ಸಾಧಿಸಲಾಗದ್ದು ಏನೂ ಇಲ್ಲವೆಂದು ನಿರ್ಣಯಿಸುವ ಮಟ್ಟಕ್ಕೆ ತಂದು ನಿಲ್ಲಿಸಿದೆ. ಅವನು ದೇವರ ಅಸ್ತಿತ್ವವನ್ನೇ ಪ್ರಶ್ನಿಸುತ್ತಿದ್ದಾನೆ. ವೈಜ್ಞಾನಿಕ ಪ್ರಗತಿಯಿಂದಾಗಿ ಅವನಿಂದು ಅದರಿಂದಾಗಿರುವ ಮಾನವೀಯ ಕಲ್ಯಾಣಕಾರಕ ಸೌಲಭ್ಯಗಳನ್ನು ಒರೆಸಿ ಹಾಕಿಬಿಡುವಂಥ ಅಪಾಯ ಸನ್ನಿಹಿತದ ವಿಜ್ಞಾನದ ಶಕ್ತಿಯನ್ನು ದುರುಪಯೋಗ ಮಾಡತಕ್ಕ ಮಾನವನು ತನ್ನ ಸರ್ವನಾಶಕ್ಕೆ ಕಾರಣನಾಗುತ್ತಿದ್ದಾನೆ. ಇದರಿಂದಾಗಿ ಮನುಷ್ಯ ನೈತಿಕ ಮತ್ತು ಆಧ್ಯಾತ್ಮಿಕ ಕ್ಷೇತ್ರಗಳಲ್ಲಿ ಹಿಂದುಳಿದು ಐಹಿಕ ಮತ್ತು ಬೌದ್ಧಿಕ ಪ್ರಗತಿಯನ್ನೇ ಪರಿಗಣಿಸುತ್ತ ದೊಡ್ಡ ಕಂದರ ನಿರ್ಮಾಣ ಮಾಡುತ್ತಲಿದ್ದಾನೆ. ಆದುದರಿಂದ ವಿಜ್ಞಾನವನ್ನು ಮಾನವ ಕಲ್ಯಾಣಕ್ಕಾಗಿ ಬಳಸುವಂತ ಗಂಭೀರ ಚಿಂತನೆಯಲ್ಲಿ ತೊಡಗುವ ಸಂದರ್ಭ ಪ್ರಸ್ತುತವಾಗಿದೆ. ಮನುಷ್ಯ ತರಕಾರಿಯೂ ಅಲ್ಲ ಅಥವಾ ಪ್ರಾಣಿಯೂ ಅಲ್ಲ. ಅವನು ಆಧ್ಯಾತ್ಮಿಕ ಜೀವಿಯಾಗಿದ್ದು, ಚಿಂತನಶೀಲ ಪ್ರವೃತ್ತಿಯುಳ್ಳವನಾಗಿ ಉದಾತ್ತ ಉದ್ದೇಶಗಳನ್ನು ಸಾಕಾರಗೊಳಿಸುವ ಶಕ್ತಿ ಪಡೆದಿದ್ದಾನೆ. ಪ್ರಾಚೀನ ಭಾರತದ ಋಷಿ ಮುನಿಗಳು ಸಾರ್ಥಕ ಜೀವನದ ಪರಿಪೂರ್ಣತೆಗಾಗಿ ಆಧ್ಯಾತ್ಮಿಕತೆಯ ಮಹತ್ವವನ್ನರಿತವರಾಗಿದ್ದರು.

ವಿಜ್ಞಾನದ ದುರುಪಯೋಗದಿಂದಾಗಬಹುದಾದ ಅಪಾಯಗಳನ್ನು ಎದುರಿಸುವ ಸಾಮರ್ಥ್ಯ ಧಾರ್ಮಿಕ ಮತ್ತು ಆಧ್ಯಾತ್ಮಿಕ ದೃಷ್ಟಿಗೆ ಮಾತ್ರ ಸಾಧ್ಯ. ಆಧ್ಯಾತ್ಮೀಕರಣದಿಂದ ಮಾತ್ರ ಮನುಕುಲದ ಉದ್ಧಾರ ಆದೀತೆಂಬುದನ್ನು ಭಾರತ ಸಾಧಿಸಿ ತೋರಿಸಿದೆ. ಹಿಂದಣ ಹೆಜ್ಜೆಯನ್ನರಿಯದೆ ಯಾವ ರಾಷ್ಟ್ರವೂ ಬೆಳೆಯಲಾರದು. ಸಂಪೂರ್ಣ ನವನಾಗರಿಕತೆಯನ್ನು ನಾವು

ಪ್ರಾರಂಭಿಸುವುದು ಸಾಧ್ಯವಿಲ್ಲ. ಗತಕಾಲ ರೂಢಿಸಿರುವ ಸಾಮಾನ್ಯ ಇತಿಮಿತಿಯೊಳಗೇ ನಾವು ಕ್ರಿಯಾನಿರತರಾಗಬೇಕು. ಭಾರತೀಯ ಸಂಸ್ಕೃತಿಯ ಶ್ರೇಷ್ಠ ಪ್ರತಿನಿಧಿಗಳೆಲ್ಲ ಸಂಚಲಿಸುವ ಮತ್ತು ಸತತ ಸಾಹಸಿಗಳಾಗಿದ್ದರು. ಆಧ್ಯಾತ್ಮಿಕತೆ ಭಾರತದ ಕೀಲಿಕೈ; ಹಾಗೆಂದರೆ ಕೇವಲ ಪಾರಮಾರ್ಥಿಕ ಚಿಂತನೆ ಮಾತ್ರ ಎಂದಲ್ಲ ಅಥವಾ ಕೇವಲ ಕನಸು ಕಾಣುವುದೆಂದಲ್ಲ. ಅದು ಪ್ರಾಪಂಚಿಕ ಜೀವನವನ್ನೂ ಸಮರ್ಥಿಸುತ್ತದೆ. ಕ್ರಿಯಾಶೀಲ ಬದುಕನ್ನು ಪ್ರೋತ್ಸಾಹಿಸುತ್ತದೆ.

"ನಿಯತಂ ಕುರು ಕರ್ಮ ತ್ವಂ
ಕರ್ಮಜ್ಯಾಯೋಹ್ಯ ಕರ್ಮಣಃ
ಶರೀರಯಾತ್ರಾಪಿ ಚ ತೇ
ನಪ್ರಸಿದ್ಧ್ಯೇದ ಕರ್ಮಣಃ"

ಭಾರತೀಯ ಸಂಸ್ಕೃತಿಯ ಮೂಲಭೂತ ನಂಬಿಕೆ ಮಾನವೀಯತೆ. ಮನುಕುಲ ಪ್ರೇಮಿಗಳೆಲ್ಲ ಧರ್ಮ ಸಂಸ್ಥಾಪಕರು. ಧರ್ಮ ಹೃದಯಗಳನ್ನು ಬೆಸೆಯುವುದರ ಮೂಲಕ ಹೊಸ ನಾಗರಿಕತೆಯ ಹುಟ್ಟಿಗೆ ಕಾರಣವಾಗುತ್ತದೆ. ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಧಾರ್ಮಿಕವಾಗಿ ಉಂಟಾಗುವ ಕೆಡುಕುಗಳಿಗೆಲ್ಲ "ಸ್ವಾಪನೆಯೊಂದರಿಂದಲೇ ಸಮರ್ಥ ಪರಿಹಾರವೆಂದು ಅವರು ಘೋಷಿಸಿದ್ದಾರೆ.

ಸ್ವರಾಜ್ಯವೆಂದರೆ -

**"ಸರ್ವ ಭೂತೇಷು ಚ ಆತ್ಮಾನಮ್
ಸರ್ವ ಭೂತಾನಿ ಚ ಆತ್ಮನಿ
ಸಮಮ್ ಪಶ್ಯತ್, ಆತ್ಮಯಾಜಿ
ಸ್ವರಾಜ್ಯಮ್ ಅಧಿಗಚ್ಛತಿ"**

"ಯಾರು ಎಲ್ಲರಲ್ಲಿ ತನ್ನನ್ನು ಕಾಣುತ್ತಾನೋ, ಮತ್ತು ತನ್ನಲ್ಲಿ ಎಲ್ಲರನ್ನು ಹಾಗೂ ತನ್ನನ್ನೇ ತಾನು ದಹಿಸಿಕೊಳ್ಳುತ್ತ ನಿಷ್ಪಕ್ಷಪಾತ ಕಣ್ಣುಗಳಿಂದ ಎಲ್ಲವನ್ನೂ ನೋಡುತ್ತಾನೋ, ಅಂಥವನು ತನ್ನಲ್ಲಿ ನಿಜವಾಗಿ ಸ್ವರಾಜ್ಯವನ್ನು ಕಾಣುತ್ತಾನೆ"

ಆದುದರಿಂದ ಮನುಕುಲದ ಸಮಸ್ಯೆಗಳ ಪರಿಹಾರಕ್ಕೆ ತನಗೆ ತಾನೇ ವಿಧಿಸಿಕೊಳ್ಳುವ ಉದಾತ್ತ ಪ್ರಭುತ್ವ ಮತ್ತು ಶಾಸನಗಳು ಮಾತ್ರ ಕೀಲಿಕೈಗಳಾಗಿವೆ. ಶ್ರೇಷ್ಠ ಜೀವಿಗಳು ಎಲ್ಲರಲ್ಲಿ ತಮ್ಮನ್ನು ಕಾಣುವ ಮತ್ತು ತಮ್ಮ ಹೆಚ್ಚಳಿಕೆಯನ್ನು ನಿರಾಕರಿಸುತ್ತ ಜಾಣ್ಮೆ, ಪರೋಪಕಾರ ಹಾಗೂ ಅನುಭವಗಳನ್ನು ಜನಕಲ್ಯಾಣಕ್ಕೆ ಬಳಸುವವರಾಗಿರುತ್ತಾರೆ. ಮಾನವನ ಸೌಖ್ಯಕ್ಕೆ ಇದೊಂದೇ ಸರಳ ಸುಂದರ ವಾಸ್ತವಿಕ ಮಾರ್ಗವಾಗಿದೆ.

ನೈಜ ಸ್ವರಾಜ್ಯ ಸ್ಥಾಪಿತಗೊಂಡರೆ, ಕುಟುಂಬ ಸುಗಮವಾಗಿರ ಬಲ್ಲದು. ಹಾಗಾದಾಗ ಕುಟುಂಬದ ಹಿತವೇ ಕಾಯಕವಾಗುತ್ತದೆ, ಪ್ರೀತಿಯೇ ಕಾನೂನಾಗುತ್ತದೆ. ಅದು ಆರ್ಥಿಕ ರಂಗವನ್ನಾಳಿದರೆ, ಮೂಲಭೂತ ಅಗತ್ಯಗಳ ವಿತರಣೆ ಮತ್ತು ಸೌಲಭ್ಯಗಳ ಸಮಾನತೆ ದೊರಕಿ ಸ್ವಾರ್ಥಕ್ಕಾಗಿ ಐಶ್ವರ್ಯ ಸಂಗ್ರಹವಿಲ್ಲದೆ ಸಾರ್ವಜನಿಕ ಕಲ್ಯಾಣಕ್ಕಾಗಿ ಪ್ರಗತಿಯುಂಟಾಗುವುದರ ಜೊತೆಗೆ, ಒಡೆಯನಾದವನು ವಿಶ್ವಸ್ಥ ಹಿರಿಯನೆಂದು ಗೌರವಕ್ಕೆ ಭಾಜನನಾಗುತ್ತಾನೆ. ಅಂಥ ಹೃದಯ ಲೋಕ ಕಲ್ಯಾಣಕ್ಕಾಗಿ ಸದಾಕಾಲ ಹಂಬಲಿಸುತ್ತದೆ. ಜನಮನ್ನಣೆಗೆ ಪಾತ್ರವಾಗುತ್ತದೆ.

ಇಂಥಹ ವ್ಯವಸ್ಥೆಯಿಂದಾಗಿ ಅಂಗಡಿ, ಮಾರುಕಟ್ಟೆ, ಕಾರ್ಖಾನೆ, ವ್ಯಾಪಾರಾದಿಗಳಲ್ಲಿ ಎಲ್ಲೆಲ್ಲಿ ಜನ ಪರಸ್ಪರ ವ್ಯವಹರಿಸುತ್ತಾರೋ ಅಲ್ಲೆಲ್ಲಾ ಸತ್ಯಸಂಧತೆ, ಪ್ರಾಮಾಣಿಕತೆ, ಸೌಜನ್ಯತೆ, ಅನುಕಂಪಗಳು ಎಲ್ಲರ ಒಳಿತಿಗಾಗಿ ದುಡಿಯುತ್ತವೆ. ಆ ವ್ಯವಸ್ಥೆ ಶಾಸನವನ್ನು ಸ್ಫೂರ್ತಿಗೊಳಿಸಿದ್ದೇ ಆದರೆ ಕಾನೂನುಗಳು ಕಲ್ಯಾಣ ಪರವಾಗುತ್ತವೆ. ಜ್ಞಾನಿ, ದೂರದರ್ಶಿ ಮತ್ತು ದಯಾಶೀಲ ಎಲ್ಲ ವರ್ಗದ ಜನರಿಗೆ, ಎಲ್ಲ ಮನೋಧರ್ಮದವರಿಗೆ, ಎಲ್ಲರ ಅಭ್ಯುದಯಕ್ಕೆ ಹಿತಾಸಕ್ತಿಗೆ ಶ್ರಮಿಸುವಂತಾಗುತ್ತದೆ. ಅದು ಶಿಕ್ಷಣಕ್ಕೆ ದಾರಿದೀಪವಾದರೆ, ಜನರ ಎಲ್ಲ ಕಾರ್ಯಚಟುವಟಿಕೆಗಳೂ ಸರಿಹೋಗುತ್ತವೆ ಮತ್ತು ಹೊಸ ಪೀಳಿಗೆಯನ್ನು ಯೋಗ್ಯ ಶಿಕ್ಷಣಕ್ಕೊಳಪಡಿಸುತ್ತದೆ. ಇದನ್ನೇ ಅರವಿಂದರು ಆಧ್ಯಾತ್ಮೀಕರಣಗೊಂಡ ಸಂಸ್ಕೃತಿಯೆನ್ನುತ್ತಾರೆ. ಸಾಮಾಜಿಕ ಅರ್ಥವ್ಯವಸ್ಥೆಗಳು ಮಾನವ ಜೀವನದ ಪ್ರಥಮ ರೂಪಗಳಾಗಿ ಒಳ್ಳೆಯ ವ್ಯವಸ್ಥೆಯಿಂದಾಗಿ, ಮನುಷ್ಯರೆಲ್ಲ ಒಟ್ಟಾಗಿ ಜೀವಿಸಬಲ್ಲ, ಉತ್ಪಾದಿಸಬಲ್ಲ, ತೃಪ್ತಿಪಡಬಲ್ಲ, ದೈಹಿಕವಾಗಿ ಬೆಳವಣಿಗೆಗೊಳ್ಳಬಲ್ಲ, ಅಗತ್ಯ ಮಾನಸಿಕ ದಕ್ಷತೆ ಹೊಂದುವಂತಾಗುತ್ತದೆ; ಆದರೆ ಆಧ್ಯಾತ್ಮಿಕ ಗುರಿ ಅವರನ್ನು ಇದಕ್ಕಿಂತ ಮಿಗಿಲಾಗಿ, ಮೊದಲನೆಯದಾಗಿ ವ್ಯಕ್ತಿ ತನ್ನೊಳಗಿನ ದೇವತ್ವದ ಬೆಳವಣಿಗೆಯನ್ನರಿಯುವಂತಾಗಿ ಜೀವನ ಕ್ರಮಕ್ಕೆ ಅಣಿಯಾಗುತ್ತದೆ. ಎರಡನೆಯದಾಗಿ ದಿವ್ಯ ನಿಯಮಗಳ ಉತ್ಕರ್ಷ ಪ್ರತೀಕವಾಗಿ ಜೀವನ ರೂಪುಗೊಳ್ಳುತ್ತದೆ. ಮೂರನೆಯದಾಗಿ, ಬೆಳಕಿನೆಡೆಗೆ ಒಂದು ಸಾಮೂಹಿಕ ಮುನ್ನಡೆ, ಶಕ್ತಿ, ಶಾಂತಿ, ಐಕ್ಯತೆ, ಮಾನವೀಯತೆಯ ದೈವೀ ಸ್ವಭಾವಗಳು ಕಾಣುವಂತಾಗುತ್ತದೆ. ಆಧ್ಯಾತ್ಮಿಕ ಸಂಸ್ಕೃತಿಯೆಂದರೆ ಇದಕ್ಕಿಂತ





ಹೆಚ್ಚು ಅಥವಾ ಕಡಿಮೆ ಎಂದು ನಾವು ತಿಳಿದುಕೊಂಡಿಲ್ಲ.

ಇದೊಂದು ಸರಿಯಾದ ಸಂದರ್ಭವೆಂದು ಭಾವಿಸಬೇಕಾಗಿದೆ - ಭಾರತೀಯರು ಜಡತೆಯನ್ನು ಕಿತ್ತೆಸೆದು ರಾಷ್ಟ್ರನಿರ್ಮಾಣ ಮಾಡುವ ಸವಾಲನ್ನು ಸ್ವೀಕರಿಸುವುದರ ಮೂಲಕ ಕಠಿಣ ಶ್ರಮ ಯಜ್ಞಕ್ಕೆ ಸಿದ್ಧರಾಗಬೇಕು. ಮುಖಂಡರು ಭಾರತವನ್ನು ಪ್ರಥಮಶ್ರೇಣಿಯ ರಾಷ್ಟ್ರವನ್ನಾಗಿ ಕಟ್ಟುವುದರಲ್ಲಿ ಸ್ಫೂರ್ತಿಗೊಂಡು ಉತ್ಸಾಹ ಹುಮ್ಮಸ್ಸು ತುಂಬಿ ಪ್ರತಿಜ್ಞಾಬದ್ಧರಾಗಬೇಕಾಗಿದೆ.

ರಾಷ್ಟ್ರ ಮುಖಂಡರು ತ್ಯಾಗ ಮತ್ತು ಸೇವಾ ಮನೋಭಾವದಿಂದ ಸ್ಫೂರ್ತಿ ಹೊಂದಿ ರಾಷ್ಟ್ರಪ್ರೇಮದಿಂದ ಉತ್ತೇಜಿತರಾಗಿ ದೀನರ, ದಲಿತರ, ಶೋಷಿತರ ಬಗೆಗೆ ಕರುಣಾರ್ದ್ರ ಹೃದಯಿಗಳಾಗಿ ಭವಿಷ್ಯ ಭಾರತವನ್ನು ಜಗತ್ತಿನ ಪ್ರಥಮ ಶ್ರೇಣಿಯಲ್ಲಿ ಪ್ರಗತಿ ಪಥದಲ್ಲಿ ಒಯ್ಯಲು ದೀಕ್ಷೆಯನ್ನು ಕೈಗೊಳ್ಳಲು ಆಶಿಸುತ್ತೇನೆ.

ರಾಷ್ಟ್ರವನ್ನು ಅತ್ಯಂತ ಉನ್ನತ ಮಟ್ಟಕ್ಕೇರಿಸಲು ಸರ್ವ ಸಮರ್ಥ, ನಿಸ್ವಾರ್ಥ, ಪ್ರತಿಭಾ ಸಂಪನ್ನ ಪ್ರಧಾನಿಗಳು ಲಭ್ಯವಾಗಿರುವ ಈ ಸಮಯದಲ್ಲಿ ಅವರು ತಮ್ಮ ಜವಾಬ್ದಾರಿಯನ್ನು ಸಮಗ್ರವಾಗಿ, ಸಮರ್ಪಕವಾಗಿ ನಿರ್ವಹಿಸಲು ಅನುಕೂಲ ವಾತಾವರಣವನ್ನು ದಯಾಮಯನಾದ ಪರಮಾತ್ಮನು ಕರುಣಿಸಲೆಂದು ಹಾರೈಸುತ್ತೇವೆ.

ಸಮಾರಂಭದಲ್ಲಿ ೮೧ ದೀಪಗಳನ್ನು ಹಚ್ಚುವ ಮೂಲಕ ಪ್ರಧಾನಿಯವರು ಸಂಸ್ಕೃತೋತ್ಸವ ಉದ್ಘಾಟಿಸಿದರು.

ಮುಖ್ಯ ಅತಿಥಿಗಳಾಗಿ ಕೇಂದ್ರ ನಾಗರೀಕ ವಿಮಾನಯಾನ ಸಚಿವರಾದ ಶ್ರೀ ಅನಂತಕುಮಾರ್, ರಾಜ್ಯಬಿಜೆಪಿ ಅಧ್ಯಕ್ಷ ಶ್ರೀ ಬಿ.ಎಸ್. ಎಡೆಯೂರಪ್ಪ, ಸಂಸದ ಶ್ರೀ ಎಸ್. ಮಲ್ಲಿಕಾರ್ಜುನಯ್ಯ, ಶಾಸಕ ಎಸ್. ಶಿವಣ್ಣ ಭಾಗವಹಿಸಿದ್ದರು.

ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀ ಶಿವಕುಮಾರ ಸ್ವಾಮಿಗಳು ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿಯವರಿಗೆ ಶಾಲು ಹೊದಿಸಿ ಸನ್ಮಾನಿಸಿ, ನೆನಪಿನ ಕಾಣಿಕೆ ನೀಡಿ ಗೌರವಿಸಿದರು. ಪ್ರಧಾನಿಯಾದ ನಂತರ ಪ್ರಥಮವಾಗಿ ಶ್ರೀಕ್ಷೇತ್ರಕ್ಕೆ ಆಗಮಿಸಿದ ವಾಜಪೇಯಿಯವರನ್ನು ಕಣ್ಣಾರೆ ಕಾಣುವ ಕಾತುರದಿಂದ ಸಾವಿರಾರು ಜನರು ಸಮಾರಂಭಕ್ಕೆ ಆಗಮಿಸಿದ್ದರು.

ಮುಖ್ಯ ಅತಿಥಿಗಳು ಹಾಗೂ ರಾಜ್ಯಪಾಲ ಖುರ್ಷಿದ್ ಆಲಂಖಾನ್‌ರವರನ್ನು ಕಿರಿಯ ಶ್ರೀಗಳಾದ ಶ್ರೀ ಸಿದ್ಧಲಿಂಗಸ್ವಾಮಿಗಳು ಶಾಲು ಹೊದಿಸಿ ಗೌರವಿಸಿದರು.

ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯದ ಪ್ರಾಂಶುಪಾಲರಾದ ಡಾ. ಎಂ.ಎನ್. ಚನ್ನಬಸಪ್ಪ ಸ್ವಾಗತಿಸಿದರು.

**ಸಮಾರಂಭವನ್ನು ಕುರಿತು........**

ಶ್ರೀ ಸಿದ್ಧಗಂಗಾ ಕ್ಷೇತ್ರಕ್ಕೆ ಪ್ರಧಾನಮಂತ್ರಿ ಶ್ರೀ ಅಟಲ್ ಬಿಹಾರಿ ವಾಜಪೇಯಿ ಅವರ ಭೇಟಿ ನೀಡಿದ ಸಂದರ್ಭ ನಮ್ಮ ಜೀವನದಲ್ಲಿ ಅವಿಸ್ಮರಣೀಯ. ಕರ್ನಾಟಕದ ಹಿರಿಮೆಯ ಧಾರ್ಮಿಕ, ಶಿಕ್ಷಣ, ಪರಂಪರಾಗತ ಎಂಟು ದಶಕಗಳ ಅವಿಸ್ಮರಣೀಯ ಸೇವಾ ಕೇಂದ್ರವಾದ ಶ್ರೀ ಕ್ಷೇತ್ರದ ಸ್ಮರಣೆ ಅಟಲ್‌ರವರ ಮುಕ್ತಕಂಠದ ಮೆಚ್ಚುಗೆ ನುಡಿಗಳು ಈಗಾಗಲೇ ದಿಕ್ಕುದಿಕ್ಕುಗಳಲ್ಲಿ ಹರಡಿರುವ ನಿರಂತರ ದಾಸೋಹ ಕಾಯಕದ ಹೊನ್ನಕಳಶ ಮತ್ತಷ್ಟು ಪ್ರಜ್ವಲಿಸುವಂತಾಗಿದೆ ನಮ್ಮ ನೆನಪಿನಲ್ಲಿ ಸದಾ ಉಳಿಯುವಂತ ಈ ಸುದಿನದಲ್ಲಿ ಶ್ರೀ ಶಿವಕುಮಾರ ಸ್ವಾಮಿಗಳವರ ದಿವ್ಯ ಸಾನಿಧ್ಯ, ಶ್ರೀ ವಾಜಪೇಯಿಯವರ ಭಾಷಣ, ವೇದಿಕೆಯ ಮೇಲ ಅಲಂಕರಿಸಿದ್ದ ಹರಗುರು ಚರಮೂರ್ತಿಗಳು ಆ ಸುಂದರ ದೃಶ್ಯವನ್ನು ನೋಡಿ ನಮ್ಮೆಲ್ಲರಿಗೂ ಅತ್ಯಂತ ಸಂತೋಷವಾಯಿತು. ಶ್ರೀಕ್ಷೇತ್ರ ಹಿರಿಮೆಯನ್ನು ಅತ್ಯುನ್ನತ ಸ್ಥಾನದಲ್ಲಿ ಕೊಂಡೊಯ್ಯುವಂತೆ ಮಾಡಿತು ಎಂಬುದ ನನ್ನ ಭಾವನೆ. ಹಣೆಗೆ ವಿಭೂತಿ ಧರಿಸಿ ಕೆಂಪು ವಸ್ತ್ರವನ್ನು ಹೊದ್ದ ಕ್ಷೇತ್ರ ವಿದ್ಯಾರ್ಥಿಗಳು ವೇದಿಕೆಯ ಮುಂದೆ ಸಾಲಾಗಿ ಕುಳಿತ ದೃಶ್ಯ ಮನಮೋಹಕವಾಗಿತ್ತು, ಇವೆಲ್ಲ ದೃಶ್ಯವನ್ನು ಪ್ರೇಕ್ಷಕರು, ಭಕ್ತಾದಿಗಳು ಬೋಗಸೆ ಕಣ್ಣುಗಳಿಂದ ತುಂಬಿಕೊಂಡು ಆನಂದ ಪಟ್ಟಿದ್ದು ಮರೆಯಲಾಗದ ಘಟನೆ.

**– ಬಿದರೆ ವೆಂಕಟನಾರಾಯಣ**
ವಕೀಲರು
ತುಮಕೂರು

ಸಿದ್ಧಗಂಗಾ ವಿದ್ಯಾಸಂಸ್ಥೆಯ ಕಾರ್ಯದರ್ಶಿ ಶ್ರೀ ಟಿ.ಕೆ. ನಂಜುಂಡಪ್ಪ ವಂದಿಸಿದರು. ಸಿದ್ಧಗಂಗಾ ಪಾಲಿಟೆಕ್ನಿಕ್ ಕಾಲೇಜಿನ ಪ್ರಾಚಾರ್ಯ ಕೆ.ಎಂ. ಚಂದ್ರಶೇಖರಯ್ಯ ಕಾರ್ಯಕ್ರಮ ನಿರೂಪಿಸಿದರು.

# ರಾಜ್ಯ ಪಡಿತರ ವಿತರಕರ ರಾಜ್ಯಮಟ್ಟದ ಸಮಾವೇಶ

"ಪಡಿತರ ವಿತರಕರು ಜನತೆಯ ಜೊತೆಯಲ್ಲಿ ಸ್ಪಂದಿಸುತ್ತಾ ಕೆಲಸ ಮಾಡಬೇಕಾದವರು. ನಮ್ಮ ದೇಶದಲ್ಲಿ ಬಹುಮಂದಿ ಬಡತನರೇಖೆಯಿಂದ ಕೆಳಗಿರುತ್ತಾರೆ. ಅವರಿಗೆ ಒಂದು ಹೊತ್ತಿನ ಊಟಕ್ಕೂ ತೊಂದರೆ ಇರುತ್ತದೆ. ಅಂತಹ ನಿರ್ಗತಿಕರಿಗಾಗಿ ಪಡಿತರ ವಿತರಕರ ಸೇವೆ ಮೀಸಲಾಗಿರಬೇಕು" ಎಂದು ಶ್ರೀ ಶಿವಕುಮಾರ ಸ್ವಾಮೀಜಿಯವರು ನುಡಿದರು.

ಸಿದ್ಧಗಂಗಾ ಕ್ಷೇತ್ರದ ವಸ್ತುಪ್ರದರ್ಶನದ ಆವರಣದಲ್ಲಿ ೨೮-೧೨-೯೮ರಂದು ಏರ್ಪಡಿಸಲಾಗಿದ್ದ ರಾಜ್ಯಪಡಿತರ ವಿತರಕರ ಸಂಘದ ರಾಜ್ಯಮಟ್ಟದ ಸಮಾವೇಶದ ದಿವ್ಯ ಸಾನಿಧ್ಯವಹಿಸಿ ಆಶೀರ್ವಚನ ನೀಡುತ್ತಿದ್ದರು. "ನಮ್ಮ ದೇಶ ಎದುರಿಸುತ್ತಿರುವ ಸಮಸ್ಯೆಗಳಿಗೆ ನಮ್ಮ ಜನಗಳಲ್ಲಿ ಅನ್ಯಾಯವನ್ನು ಖಂಡಿಸುವ ಗುಣ ಹಾಗೂ ಜಾಗೃತಿಯ ಕೊರತೆಯೇ ಕಾರಣ" ಎಂದು ಶ್ರೀಗಳವರು ಅಭಿಪ್ರಾಯಪಟ್ಟರು.

ಆಹಾರ ಇಲಾಖೆಯ ಇಡೀ ಸರ್ಕಾರದಲ್ಲೇ ಅತ್ಯಂತ ಪ್ರಮುಖವಾದ ಇಲಾಖೆ. ಇದು ಆಹಾರ ವಿತರಣೆಯಲ್ಲಿ ಹಾಗೂ ಇನ್ನಿತರ ಪ್ರಕ್ರಿಯೆಗಳಲ್ಲಿ ಇರಬಹುದಾದ ಲೋಪದೋಷಗಳನ್ನು ನಿವಾರಿಸಿಕೊಂಡು ಜನತೆಯ ಜತೆಯಲ್ಲಿ ಸ್ಪಂದಿಸಿ ಜವಾಬ್ದಾರಿಯುತವಾಗಿ ಕೆಲಸಮಾಡಬೇಕಾದ ಅಗತ್ಯವಿದೆ ಎಂದು ಆಹಾರ ಮತ್ತು ನಾಗರೀಕ ಪೂರೈಕೆ ಸಚಿವ ಶ್ರೀ ಬಸವಣ್ಣಪ್ಪ ಸಮಾವೇಶವನ್ನು ಉದ್ಘಾಟಿಸಿ ಮಾತನಾಡಿದರು.

ಶಿಗ್ಗಾವಿಯ ಶಾಸಕ ಹಾಗೂ ಕಾಂಗ್ರೆಸ್ ಪಕ್ಷದ ಮುಖ್ಯ ಸಚೇತಕ ಶ್ರೀ ಮಂಜುನಾಥ ಸಿ. ಕುನ್ನೂರ ಸಂಘದ ಹೆಸರಿನ ನಾಮಫಲಕ ಅನಾವರಣಗೊಳಿಸಿದರು. ಸಮಾರಂಭದಲ್ಲಿ ವಿಧಾನ ಪರಿಷತ್ ಸದಸ್ಯ ಶ್ರೀ ಕೆ. ಎನ್. ರಾಜಣ್ಣ ಹಾಗೂ ಮಾಜಿ ಸಂಸದ ಶ್ರೀ ಜಿ.ಎಸ್. ಬಸವರಾಜು ಉಪಸ್ಥಿತರಿದ್ದು ಮಾತನಾಡಿದರು. ಅರಸೀಕೆರೆಯ ದಾನಿ ಶ್ರೀ ಜಯಣ್ಣ ಅವರನ್ನು ಸಚಿವ ಶ್ರೀ ಬಸವಣ್ಣಪ್ಪ ಸನ್ಮಾನಿಸಿದರು. ಸಂಘದ ಅಧ್ಯಕ್ಷ ಶ್ರೀ ಬಿ.ವಿ. ರಾಮು ಸ್ವಾಗತಿಸಿದರು. ರ್‍ಯಾಕ್‌ಲೈನ್ ಶ್ರೀ ರವಿ ಕಾರ್ಯಕ್ರಮವನ್ನು ನಿರೂಪಿಸಿದರು.

# ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ವಜ್ರಮಹೋತ್ಸವ ಸವಿನೆನಪಿನ ಕ್ರೀಡಾಕೂಟ



ಜಿಲ್ಲಾಧಿಕಾರಿ ಶ್ರೀ ಕೆ.ಹೆಚ್. ಗೋಪಾಲಕೃಷ್ಣಗೌಡ ಅವರು ಜ್ಯೋತಿ ಬೆಳಗಿಸಿ ಕ್ರಿಡಾಕೂಟವನ್ನು ಉದ್ಘಾಟಿಸುತ್ತಿರುವುದು

ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಪ್ರೌಢಶಾಲೆ ಹಾಗೂ ಪ್ರಾಥಮಿಕ ಶಾಲೆಗಳಿಗಾಗಿ ೨೫-೧೨-೯೮ರಿಂದ ೨೬-೧೨-೯೮ರವರೆಗೆ ಕ್ರೀಡಾಕೂಟ ನಡೆಯಿತು.

ದಿ ೨೫-೧೨-೯೮ರಂದು ತುಮಕೂರು ಜಿಲ್ಲೆಯ ಜಿಲ್ಲಾಧಿಕಾರಿಗಳಾದ ಶ್ರೀ ಕೆ. ಹೆಚ್. ಗೋಪಾಲಕೃಷ್ಣಗೌಡರವರು ಕ್ರೀಡಾಕೂಟವನ್ನು ಉದ್ಘಾಟಿಸಿದರು. ಈ ಕಾರ್ಯಕ್ರಮದ ದಿವ್ಯಸಾನಿಧ್ಯವನ್ನು ಕಿರಿಯ ಶ್ರೀಗಳಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ವಹಿಸಿದ್ದರು. ಬೆಂಗಳೂರಿನ ಯುವಜನ ಸೇವೆ ಹಾಗೂ ಕ್ರೀಡೆಯ ಜಂಟಿನಿರ್ದೇಶಕರಾದ ಶ್ರೀ ಆರ್. ಎಲ್. ಪಾಟೀಲ್ ಧ್ವಜಾರೋಹಣ ಮಾಡಿದರು.

ತುಮಕೂರಿನ ಟಿ.ವಿ.ಎಸ್.ಇ.ನ ಉಪಾಧ್ಯಕ್ಷರಾದ ಶ್ರೀ ಬಾಡಗಂಡಿ ಅಧ್ಯಕ್ಷತೆಯನ್ನು ವಹಿಸಿದ್ದರು. ತುಮಕೂರಿನ ಸಾರ್ವಜನಿಕ ಶಿಕ್ಷಣ ಇಲಾಖೆಯ ಜಿಲ್ಲಾ ದೈಹಿಕಶಿಕ್ಷಣ ಅಧೀಕ್ಷಕರಾದ ಶ್ರೀ ವಿ.ವೆಂಕಟಸುಬ್ಬಯ್ಯನವರು ಕ್ರೀಡಾಜ್ಯೋತಿ ಸ್ವೀಕರಿಸಿದರು.

## ಮುಕ್ತಾಯ ಸಮಾರಂಭ

೨೬-೧೨-೯೮ರಂದು ಕ್ರೀಡಾಕೂಟದ ಮುಕ್ತಾಯ ಸಮಾರಂಭವನ್ನು ಶ್ರೀಕ್ಷೇತ್ರದ ಆವರಣದಲ್ಲಿ ಏರ್ಪಡಿಸಲಾಗಿತ್ತು.





ಬೆಂಗಳೂರು ಮಹಾನಗರ ಪಾಲಿಕೆಯ ಕಾರ್ಯಾಚರಣೆ ಪಡೆಯ ಐ.ಜಿ.ಪಿ. ಶ್ರೀ ಡಿ.ಎನ್. ಮುನಿಕೃಷ್ಣ ಅವರು ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಬೆಂಗಳೂರಿನ ಸಿ.ಓ.ಡಿಯ ಡಿ.ಐ.ಜಿ. ಶ್ರೀ ಬಿ.ಜಿ. ಜ್ಯೋತಿ ಪ್ರಕಾಶ್ ಮಿರ್ಜಿ ಹಾಗೂ ತುಮಕೂರು ಜಿಲ್ಲೆಯ ಸೂಪರಿಂಟೆಂಟ್ ಆಫ್ ಪೊಲೀಸ್ ಡಾ. ಸುರ[illegible] ಕೆ ಮಹಮದ್ ಐ.ಪಿ.ಎಸ್. ಇವರುಗಳು ಕ್ರೀಡಾಕೂಟದಲ್ಲಿ ವಿಜೇತರಾದ ಕ್ರೀಡಾಪಟುಗಳಿಗೆ ಪ್ರಶಸ್ತಿ ಪತ್ರ ಮತ್ತು ಬಹುಮಾನವನ್ನು ವಿತರಣೆ ಮಾಡಿದರು.

ಸಮಾರಂಭದ ದಿವ್ಯಸಾನಿಧ್ಯವಹಿಸಿದ್ದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಆಶೀರ್ವಚನ ನೀಡಿದರು.

ಕ್ರೀಡಾ ಕೂಟದಲ್ಲಿ ಸುಮಾರು ೫೦ ಪ್ರೌಢಶಾಲೆಗಳು ಹಾಗೂ ೬ ಪ್ರಾಥಮಿಕ ಶಾಲೆಗಳಿಂದ ಸು ೧೫೦೦ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಪ್ರೌಢಶಾಲಾ ವಿಭಾಗದಲ್ಲಿ ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ ಶುಕ್ರವಾರ ಸಂತೆ, ಸಕಲೇಶಪುರ ತಾಲ್ಲೂಕು ಈ ತಂಡ ಕ್ರೀಡಾಕೂಟದ ಸಮಗ್ರ ತಂಡಪ್ರಶಸ್ತಿ ಪಡೆದರೆ: ಪಂದ್ಯಾಟಗಳಲ್ಲಿ ಬಾಲಕರ ವಾಲಿಬಾಲ್ ಪ್ರಥಮಸ್ಥಾನವನ್ನು ತುಮಕೂರಿನ ಸಿದ್ಧಗಂಗಾ ಪದವಿಪೂರ್ವ ಕಾಲೇಜು ಪಡೆಯಿತು. ಬಾಲಕಿಯರ ಖೋ-ಖೋ ಆಟದಲ್ಲಿ ಪ್ರಥಮ ಸ್ಥಾನವನ್ನು ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ ತೊಟಗೆರೆ ಇವರು ಪಡೆದರು.

ಪ್ರಾಥಮಿಕ ಶಾಲಾ ವಿಭಾಗದಲ್ಲಿ ಕ್ರೀಡಾಕೂಟದ ಸಮಗ್ರ ತಂಡ ಪ್ರಶಸ್ತಿಯನ್ನು ಹಾಗೂ ಪಂದ್ಯಾಟಗಳಲ್ಲಿ ಬಾಲಕರ ವಾಲಿಬಾಲ್ ಪ್ರಥಮ ಸ್ಥಾನವನ್ನು ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಹಿರಿಯ ಪ್ರಾಥಮಿಕ ಪಾಠಶಾಲೆ ಶ್ರೀ ಸಿದ್ಧಗಂಗಾಮಠ ಪಡೆಯಿತು. ಬಾಲಕಿಯರ ಖೋ - ಖೋ ಆಟದಲ್ಲಿ ಬೆಂಗಳೂರಿನ ಅಂಬಿಕಾ ಹಿರಿಯ ಪ್ರಾಥಮಿಕ ಶಾಲೆ ಪ್ರಥಮ ಸ್ಥಾನ ಪಡೆಯಿತು.

ವರದಿ : ಕೆ. ಬಿ. ಶಿವಶಂಕರಯ್ಯ

> ಒಬ್ಬ ಮುದುಕ ಹೇಳಿದ "ನನ್ನ ಪರಿಸ್ಥಿತಿಯ ಬಗ್ಗೆ ನಾನೆಂದೂ ದೂರಿದವನಲ್ಲ, ಆದರೆ ಒಂದು ಸಲ ಮಾತ್ರ - ನಾನು ಬರಿಗಾಲಿನಲ್ಲಿದ್ದಾಗ; ಆಗ ಪಾದರಕ್ಷೆಗಳನ್ನು ಕೊಳ್ಳಲು ನನ್ನಲ್ಲಿ ಹಣವಿರಲಿಲ್ಲ. ಆದರೆ, ನಾನೊಬ್ಬ ಕಾಲಿಲ್ಲದ ವ್ಯಕ್ತಿಯನ್ನು ನೋಡಿ ಸಮಾಧಾನಗೊಂಡೆ".
> -- ಹೆಚ್. ಕೆ. ವೈಟ್

# ಶ್ರದ್ಧಾಂಜಲಿ

## ಶ್ರೀ ಬಿ. ಟಿ. ಉಮೇಶ್

ಶರಣ ಸೇವಾ ಸಮಾಜ, ವೀರಶೈವ ಸಹಕಾರ ಸಂಘ, ವೀರಶೈವ ಸಹಕಾರಿ ಬ್ಯಾಂಕ್ ಮೊದಲಾದ ಪ್ರತಿಷ್ಠಿತ ಸಂಸ್ಥೆಗಳಲ್ಲಿ ಸಕ್ರಿಯವಾಗಿ ತಮ್ಮನ್ನು ತೊಡಗಿಸಿಕೊಂಡು ಪ್ರಾಮಾಣಿಕ ದುಡಿಮೆಯಿಂದ ಉನ್ನತ ಹುದ್ದೆಗಳನ್ನು ಅಲಂಕರಿಸಿ ಆಯಾ ಹುದ್ದೆಗಳಿಗೆ ಗೌರವವನ್ನು ತಂದುಕೊಟ್ಟು, ಸರಳತೆ, ಸಜ್ಜನಿಕೆಯಿಂದ ಎಲ್ಲರಿಗೂ ಬೇಕಾದವರಾಗಿದ್ದ ಶ್ರೀ ಬಿ.ಟಿ. ಉಮೇಶ್ ಅವರು ಸಹಕಾರ ಕ್ಷೇತ್ರದ ಧುರೀಣರಲ್ಲಿ ಒಬ್ಬರಾಗಿದ್ದರು.

ಅಖಿಲ ಭಾರತ ಸಹಕಾರ ಮಂಡಳಿಯ ಅಧ್ಯಕ್ಷರಾಗಿ ಸರ್ವಾನುಮತದಿಂದ ಆಯ್ಕೆಯಾಗಿ ಪ್ರಪ್ರಥಮ ಬಾರಿಗೆ ದಕ್ಷಿಣ ಭಾರತವನ್ನು ಪ್ರತಿನಿಧಿಸಿದ್ದು, ಕರ್ನಾಟಕಕ್ಕೆ ಕೀರ್ತಿಯನ್ನು, ಗೌರವವನ್ನು ತಂದುಕೊಟ್ಟಿದ್ದ ಶ್ರೀ ಬಿ.ಟಿ. ಉಮೇಶ್ ಅವರ ಅಕಾಲ ಮರಣ ಸಹಕಾರ ಕ್ಷೇತ್ರಕ್ಕೆ ವಿಶೇಷವಾಗಿ ನಮ್ಮ ಸಮಾಜಕ್ಕೆ ತುಂಬಲಾರದ ನಷ್ಟ. ದಯಾಮಯನಾದ ಪರಶಿವನು ಅವರ ಆತ್ಮಕ್ಕೆ ಶಾಂತಿಯನ್ನು ನೀಡಲೆಂದು 'ಸಿದ್ಧಗಂಗಾ' ಪತ್ರಿಕಾ ಬಳಗ ಪ್ರಾರ್ಥಿಸುತ್ತದೆ.

ಪಂಚೇಂದ್ರಿಯಗಳಲ್ಲಿ ಒಂದರ ಗುಣವ ಒಂದರಿಯದಿರೆ,
ಹಿಂಗಿ ಲಿಂಗಕ್ಕರ್ಪಿತವಾದ ಮುಖವಿನ್ನೆಂತೊ?
ತದ್ಭಾವಂಗಳ ತದ್ಭಾವದಿಂದಲ್ಲದೆ ಅರಿಯಬಾರದು.
ಕೊಡುವ ಅಂಗಭೇದ ಹಲವಲ್ಲದೆ ಅರಿವಾತ್ಮ ಒಂದೆ ಭೇದ.
ತಾ ತನ್ನ ಮರೆದಲ್ಲಿ ಮರಣ, ತನ್ನ ತಾನರಿದಲ್ಲಿ ಜನನ.
ನಾ ನೀನೆಂಬ ಭಾವದ ಭ್ರಮೆ ಹರಿದಲ್ಲಿ
ತಟ್ಟುವ ಮುಟ್ಟುವ ಕೃತ್ಯದ ಸೂತಕ ಇತ್ತಲೆ ಉಳಿಯಿತ್ತು.
ಕಾಮಧೂಮ ಧೂಳೇಶ್ವರನತ್ತಲೈದಾನೆ.

- ಮಾದಾರ ಧೂಳಯ್ಯ

# ಪೂಜ್ಯ ಶ್ರೀ ಶ್ರೀಗಳವರು ಭಾಗವಹಿಸಿದ ಸಭೆ-ಸಮಾರಂಭಗಳು

## ಒಂದು ಸಂಕ್ಷಿಪ್ತ ವರದಿ

### ಮುನೇಶ್ವರಸ್ವಾಮಿ ದೇವಾಲಯ ಶಂಕುಸ್ಥಾಪನೆ



"ಭಾರತ ನಾಗರಿಕತೆಯ ಉಗಮಸ್ಥಾನ, ಜಗತ್ತಿಗೆ ಜೀವನ ಮಾರ್ಗವನ್ನು ತಿಳಿಸಿ ಜಗದ್ಗುರು ಸ್ಥಾನದಲ್ಲಿರುವುದು. ಆದ್ದರಿಂದ ಜನರಿಗೆ ಕ್ಷೇಮವನ್ನುಂಟುಮಾಡುವ ಕೆಲಸ ಕಾರ್ಯಗಳನ್ನು ಪ್ರತಿಯೊಬ್ಬರು ನಿರ್ವಹಿಸಬೇಕು" ಎಂದು ಪರಮಪೂಜ್ಯ ಮಠಾಧ್ಯಕ್ಷ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ನುಡಿದರು.

ಡಿಸೆಂಬರ್ ೧೨ ರಂದು ಗೋವಿಂದಪುರದಲ್ಲಿ ಕಿರುನೀರು ಸರಬರಾಜು ಯೋಜನೆಗೆ ಮತ್ತು ಶ್ರೀ ಮುನೇಶ್ವರಸ್ವಾಮಿ ದೇವಾಲಯಕ್ಕೆ ಶಂಕುಸ್ಥಾಪನೆ ಮಾಡಿ ಆಶೀರ್ವಚನ ನೀಡಿದ ಶ್ರೀ ಶ್ರೀಗಳವರು ಗ್ರಾಮಗಳಲ್ಲಿ ಸದ್ಭಾವನೆಗಳು ಮೂಡಿಬರಲಿ. ದ್ವೇಷಾಸೂಯೆಗಳು ಅಳಿಯಲಿ ಎಂದು ಆಶಿಸಿದರು.

ವೈದ್ಯಕೀಯ ಶಿಕ್ಷಣ ಸಚಿವ ಡಾ. ಎಂ. ಶಂಕರ ನಾಯಕ್ ಅವರು ಅಂಗನವಾಡಿ ಮತ್ತು ಪ್ರಾಥಮಿಕ ಶಾಲಾ ಕೊಠಡಿ ಉದ್ಘಾಟಿಸಿದರು.

ಗೋಪಾಲಪುರ ಪಂಚಾಯಿತಿ ಅಧ್ಯಕ್ಷೆ ಶ್ರೀಮತಿ ಆಶಾ ಸಿದ್ದಲಿಂಗಪ್ಪ ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾ ಪಂಚಾಯಿತಿ ಸದಸ್ಯ ಶ್ರೀ ಸೀನಪ್ಪ, ಪಿ.ಎಲ್. ಡಿ. ಬ್ಯಾಂಕ್ ಅಧ್ಯಕ್ಷ ಶ್ರೀ ತಿಮ್ಮರಸಯ್ಯ, ಜಿಲ್ಲಾ ಪಂಚಾಯಿತಿ ಮಾಜಿ ಅಧ್ಯಕ್ಷ ಶ್ರೀ ವೆಂಕಟೇಶ, ತಾಲ್ಲೂಕು ಪಂಚಾಯಿತಿ ಅಧ್ಯಕ್ಷ ಶ್ರೀ ತಂಗರಾಜು ಅವರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

### ಪ್ರೀತಿಯ ಆಧಾರದ ಮೇಲೆ ಧರ್ಮ ನಿಂತಿದೆ

-- ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು

"ಮಾನವಧರ್ಮ ಎಂದರೆ ಪ್ರೀತಿ ವಿಶ್ವಾಸ. ಪ್ರೀತಿ ವಿಶ್ವಾಸವಿಲ್ಲದ ಜೀವನ ಜೀವನವಲ್ಲವೆಂದು" ಶ್ರೀಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವವರು ನುಡಿದರು.



ಅವರು ಡಿಸೆಂಬರ್ ೩, ೧೯೯೮ರಂದು ತುರವೇಕೆರೆಯಲ್ಲಿ ಇಲ್ಲಿನ ವಿರಕ್ತಮಠದ ಆವರಣದಲ್ಲಿ ಏರ್ಪಡಿಸಿದ್ದ ೫೨ನೇ ಪೌರ್ಣಮಿ ಪೂಜೆ. ಶಿವಯೋಗೀಶ್ವರ ಜ್ಞಾನಪೀಠ ಕೊಠಡಿ ಹಾಗೂ ವಿದ್ಯಾರ್ಥಿನಿಲಯದ ಶಂಕು ಸ್ಥಾಪನಾ ಸಮಾರಂಭದ ಶಂಕು ಸ್ಥಾಪನೆಯನ್ನು ನೆರವೇರಿಸಿ ಮಾತನಾಡಿದರು.

ಹಿಟ್ಲರ್. ಮುಸಲೋನಿ, ಅಲೆಕ್ಸಾಂಡರ್‌ನಂಥವರು ದೇಶ ದೇಶಗಳ ನಡುವೆ ಕಿಚ್ಚು ಮೂಡಿಸಿ ಹಣ ಸಂಪಾದನೆಗೆಂದೇ ಹೋರಾಟ ಮಾಡಿ ಪ್ರಸಿದ್ಧರಾದವರು. ಆದರೆ ಬುದ್ಧ, ಪೈಗಂಬರ್. ಬಸವಣ್ಣನಂತವರು ನಿರಾಡಂಬರ ಜೀವನ ಮಾಡಿ ಮಾನವೀಯ ಮೌಲ್ಯಗಳನ್ನು ಅಳವಡಿಸಿಕೊಂಡು ಮಾನವೀಯತೆಯ ಪತಾಕೆಯನ್ನು ಹಾರಿಸಿದರು.

"ಬಸವಣ್ಣನವರ ಹೃದಯ ವಿಶಾಲವಾದದ್ದು. ಪ್ರೀತಿ ವಿಶ್ವಾಸದ ದೃಷ್ಟಿಯಲ್ಲಿ ದೇಶವನ್ನೇ ಗೆದ್ದವರು. ಅವರ ಮೌಲ್ಯಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳುವಂತೆ" ಕರೆ ನೀಡಿದ ಶ್ರೀ ಶ್ರೀಗಳು





"ಬಸವ ಚಿಂತನೆ ಸಮಾಜದ ಸರ್ವ ಸಮಸ್ಯೆಗಳ ಪರಿಹಾರ" ಎಂದರು.

ತರಳಬಾಳು ಜಗದ್ಗುರು ಶ್ರೀ ಶ್ರೀ ಶಿವಮೂರ್ತಿ ಶಿವಾಚಾರ್ಯ ಸ್ವಾಮಿಗಳು ಆಶೀರ್ವಚನ ನೀಡಿ "ಐಶ್ವರ್ಯವೆಂಬುದು ಕೆರೆಯ ಕೋಡಿ ಇದ್ದಂತೆ, ಅದನ್ನು ಆ ಮಟ್ಟದಿಂದ ಮೇಲೇರಿಸಬಾರದು. ತುಂಬಿದ ನಂತರ ಹೊರ ಹರಿಯಬೇಕು. ಅದೇ ರೀತಿ ಮಾನವ ಸಂಪತ್ತೂ ಸಹ ತುಂಬಿದ ನಂತರ ಸಮಾಜದ ಏಳ್ಗೆಗೆ ಸಹಕಾರಿಯಾಗಬೇಕು" ಎಂದು ನುಡಿದರು.

ನೊಣವಿನಕೆರೆ ಕಾಡಸಿದ್ಧೇಶ್ವರ ಮಠದ ಸ್ವಾಮಿಗಳವರು ಆಶೀರ್ವಚನ ನೀಡಿದರು. ಶ್ರೀ ಕರಿವೃಷಭ ದೇಶಿಕೇಂದ್ರ ಹಿರಿಯ ಮಹಾಸ್ವಾಮಿಗಳ ಸಾನ್ನಿಧ್ಯದಲ್ಲಿ ನಡೆದ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಕರಿವೃಷಭ ದೇಶೀಕೇಂದ್ರ ಶಿವಯೋಗೀಶ್ವರ ಮಹಾಸ್ವಾಮಿಗಳು ವಹಿಸಿದ್ದರು.

### ಕರ್ನಾಟಕ ತಿಗಳರ ವಿದ್ಯಾಭಿವೃದ್ಧಿ ಸಂಘದ ರಜತ ಮಹೋತ್ಸವ ಕಟ್ಟಡ ಉದ್ಘಾಟನೆ




ಡಿಸೆಂಬರ್ ೬ ರಂದು ನಡೆದ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳು, ಸಾರಿಗೆ ಸಚಿವ ಶ್ರೀ ಪಿ.ಜಿ.ಆರ್. ಸಿಂಧ್ಯಾ ಹಾಗೂ ಸಂಘದ ಪದಾಧಿಕಾರಿಗಳು

ಅಧಿಕಾರದ ಅಭಿಮಾನ, ಸಂಪತ್ತಿನ ಅಭಿಮಾನ, ರೂಪದ ಅಭಿಮಾನ. ಅನುಭವದ ಅಭಿಮಾನ, ಕರ್ತೃತ್ವದ ಅಭಿಮಾನ. ಚಾರಿತ್ರ್ಯದ ಅಭಿಮಾನ. ಬಲದ ಅಭಿಮಾನ, ಕುಲದ ಅಭಿಮಾನ. ವಿದ್ವತ್ತಿನ ಅಭಿಮಾನ - ಇವು ಒಂಬತ್ತು ಬಗೆ. ಆದರೆ ನನಗೆ ಅಭಿಮಾನ ಇಲ್ಲ ಎಂಬ ಭಾವನೆಯಂಥ ಭಯಂಕರ ಅಭಿಮಾನ ಬೇರೊಂದಿಲ್ಲ.

-- ವಿನೋಬಾ

### ಅಖಿಲ ಭಾರತ ದೇವಾಂಗ ಸಮ್ಮೇಳನ



ಡಿಸೆಂಬರ್ ೬, ೧೯೯೮ ರಂದು ಬೆಂಗಳೂರು ಅರಮನೆ ಮೈದಾನದಲ್ಲಿ ನಡೆದ ಅಖಿಲಭಾರತ ದೇವಾಂಗ ಸಮ್ಮೇಳನದ ಸವಿನೆನಪಿಗಾಗಿ ಹೊರತಂದ ನೆನಹಿನ ಸಂಚಿಕೆಯನ್ನು ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು ಬಿಡುಗಡೆ ಮಾಡುತ್ತಿರುವುದು. ವೇದಿಕೆಯಲ್ಲಿ ಸುತ್ತೂರು ಜಗದ್ಗುರು, ಆದಿಚುಂಚನಗಿರಿ ಜಗದ್ಗುರು, ಹಂಪಿ ಹೇಮಕೂಟದ ಗಾಯಿತ್ರಿ ಪೀಠದ ಜಗದ್ಗುರುಗಳು ಉಪಸ್ಥಿತರಿದ್ದರು.

"ಇದು ವಿಜ್ಞಾನ ಯುಗ, ನಮ್ಮಲ್ಲಿರುವ ಪ್ರತ್ಯೇಕತಾ ಮನೋಭಾವ ಹೋಗಬೇಕು. ಇಂದು ಶಾಂತಿ ಸಾಮ್ರಾಜ್ಯ ನಿರ್ಮಾಣವಾಗಬೇಕು. ಮಾನವ ಧರ್ಮಬೇಕಾಗಿದೆ ಎಂದು ತಮ್ಮ ಆಶೀರ್ವಚನ ಭಾಷಣದಲ್ಲಿ ತಿಳಿಸಿದ ಶ್ರೀ ಶ್ರೀಗಳವರು ವಿಜ್ಞಾನ ಕೆಟ್ಟದ್ದಲ್ಲ ಎಂದರು. ಈ ಸಮಾಜಕ್ಕೆ ದೇವಲ ಮಹರ್ಷಿ ಹಿನ್ನೆಲೆ ಇದೆ, ಮಹಾಸಂಕಲ್ಪ ನಿರಂತರ ಪ್ರಯತ್ನ ಒಳ್ಳೆಯ ಪರಿಸರ ವಿಶಾಲ ಭಾವನೆ ಇಂದು ಅಗತ್ಯವಾಗಿದ್ದು ಈಸಮಾಜ ಸರ್ವಾಂಗೀಣವಾಗಿ ಬೆಳೆಯಲಿ ಎಂದು ಶುಭ ಹಾರೈಸಿದರು."

## ಮಧುಗಿರಿಯಲ್ಲಿ ಶೈಕ್ಷಣಿಕ ಸಮ್ಮೇಳನ



ಡಿಸೆಂಬರ್ ೧೬ರಂದು ಮಧುಗಿರಿ ತಾಲ್ಲೂಕು ಪ್ರಾಥಮಿಕ ಶಾಲಾ ಮುಖ್ಯೋಪಾಧ್ಯಾಯರ ಸಂಘ ಹಾಗೂ ಶಿಕ್ಷಕರ ಸಂಘದ ಸಂಯುಕ್ತ ಆಶ್ರಯದಲ್ಲಿ ಮಧುಗಿರಿಯಲ್ಲಿ ಏರ್ಪಡಿಸಿದ್ದ ಶೈಕ್ಷಣಿಕ ಸಮ್ಮೇಳನವನ್ನು ಪರಮ ಪೂಜ್ಯ ಶ್ರೀ ಶ್ರೀಗಳವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶಿಕ್ಷಣ ಇಲಾಖೆಯ ನಿವೃತ್ತ ನಿರ್ದೇಶಕ ಶ್ರೀ ಬಿ. ಪಿ. ತಿಪ್ಪಯ್ಯ, ಶಿಕ್ಷಣಾಧಿಕಾರಿಗಳಾದ ಶ್ರೀ ವೆಂಕಟರಾಮು, ಶ್ರೀ ಸೈಯದ್ ಖಲಂದರ್ ಮೊದಲಾದವರು ಉಪಸ್ಥಿತರಿದ್ದರು.

## ವಿಜಯಪುರದಲ್ಲಿ ಶಿವಾನುಭವ ಗೋಷ್ಠಿ




ವಿಜಯಪುರದಲ್ಲಿ ಇತ್ತೀಚೆಗೆ ನಡೆದ ಶಿವಾನುಭವ ಗೋಷ್ಠಿಯಲ್ಲಿ ಶ್ರೀ ಶ್ರೀಗಳವರು ಆಶೀರ್ವಚನ ನೀಡುತ್ತಿರುವುದು. ವೇದಿಕೆಯಲ್ಲಿ ಸಿದ್ಧಗಂಗಾ ಮಾಸಪತ್ರಿಕೆಯ ಸಂಪಾದಕರಾದ ಪ್ರೊ. ಹೆಚ್. ವಿ. ವೀರಭದ್ರಯ್ಯ ಹಾಗೂ ಶ್ರೀ ಸಿ.ಎಂ. ವೀರಣ್ಣ ಅವರು ಉಪಸ್ಥಿತರಿದ್ದರು

*Printed at : Geetanjali Printers, Bangalore-54*



ಬೆಂಗಳೂರಿನಲ್ಲಿ ನಡೆದ ಅಖಿಲ ಭಾರತ ದೇವಾಂಗ ಮಹಾಸಮ್ಮೇಳನವನ್ನು ಶ್ರೀ ಶ್ರೀ ತಿರುಚಿ ಸ್ವಾಮಿಗಳು ಜ್ಯೋತಿ ಬೆಳಗಿಸಿ ಉದ್ಘಾಟಿಸುತ್ತಿರುವುದು. ಈ ಸಂದರ್ಭದಲ್ಲಿ ಶ್ರೀ ಸಿದ್ಧಗಂಗಾ ಶ್ರೀಶ್ರೀಗಳವರು, ಆದಿಚುಂಚನಗಿರಿ ಶ್ರೀಶ್ರೀಗಳವರು, ಸಿರಿಗೆರೆ ಶ್ರೀಶ್ರೀಗಳವರು, ಸುತ್ತೂರು ಶ್ರೀಶ್ರೀಗಳವರು ಹಾಗೂ ಹೇಮಕೂಟ ಶ್ರೀಶ್ರೀಗಳವರು ಉಪಸ್ಥಿತರಿದ್ದರು.




ಡಿಸೆಂಬರ್ ೭ರಂದು ತುರುವೇಕೆರೆ ವಿರಕ್ತ ಮಠದಲ್ಲಿ ನಡೆದ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ತರಳಬಾಳು ಜಗದ್ಗುರು ಡಾ. ಶ್ರೀ ಶ್ರೀ ಶಿವಮೂರ್ತಿ ಶಿವಾಚಾರ್ಯ ಸ್ವಾಮಿಗಳು, ವಿರಕ್ತ ಮಠದ ಶ್ರೀಶ್ರೀಗಳು ಹಾಗೂ ನೊಣವಿನಕೆರೆಯ ಶ್ರೀಶ್ರೀಗಳವರು.